Approved by the Department of Public Instruction

# ಕರ್ನಾಟಕ ಸ್ಕೌಟ್ ಮತ್ತು ಗೈಡ್

# The Karnataka Scout and Guide

Vol. 70 July 1987 No. 4



Cooking competition by Guides of Bangalore South

PUBLISHED BY

**The Bharat Scouts & Guides, Karnataka State**

Prof. P. Sivashankar Circle, Fort, Bangalore-560 002

**Annual Subscription Rs. 10/- only**

## ಈ ಸಂಚಿಕೆಯಲ್ಲಿ

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಸಂಪುಟ ೨೦ | ಜುಲೈ, ೧೯೮೨ | ಸಂಚಿಕೆ ೪

## ಅವಿದ್ಯಾವಂತ ಮಕ್ಕಳನ್ನು ಶಾಲೆಗೆ ತರುವ ಯತ್ನ ಮಾಡಿ

ನಮ್ಮ ದೇಶದ ಗ್ರಾಮೀಣ ಭಾಗಗಳಲ್ಲಿ ಹೆಚ್ಚಾಗಿ ಅವಿದ್ಯಾವಂತರೇ ಇದ್ದು ಅವರ ಮಕ್ಕಳನ್ನು ಶಾಲೆಗೆ ಕಳುಹಿಸದ ಕಾರಣ ಆ ಮಕ್ಕಳೂ ಅವಿದ್ಯಾವಂತರಾಗುತ್ತಿದ್ದಾರೆ, ಅಂಥವರನ್ನು ಪೋಷಕರಿಗೆ ಸೂಕ್ತ ತಿಳುವಳಿಕೆ ನೀಡಿ ಆ ಮಕ್ಕಳನ್ನು ಶಾಲೆಗೆ ಕರೆತರುವ ಕೆಲಸವನ್ನು ನೀವು ಮಾಡಬೇಕೆಂದು ಸ್ಕೌಟ್ ಮತ್ತು ಗೈಡ್ ಮಕ್ಕಳಿಗೆ ಹೊಸಪೇಟೆಯಲ್ಲಿ ಜೂನ್ ೨೬ ರಂದು ಸಹಾಯಕ ಆಯುಕ್ತ ಜೆ. ಡಿ. ಶೀಲವ್ ಕರೆನೀಡಿದರು.

ಅಲ್ಲಿನ ಶ್ರೀರಾಮುಲು ನಗರದಲ್ಲಿ ಆರಂಭವಾದ ಶ್ರಮದಾನ ಶಿಬಿರವನ್ನು ಅವರು ಉದ್ಘಾಟಿಸುತ್ತಿದ್ದರು. ಇಂತಹ ಶ್ರಮದಾನ ಶಿಬಿರಗಳಿಂದ ಮಲೀನತೆಯಿಂದ ಬರುವ ಕಾಲರಾ, ಮಲೇರಿಯಾಗಳಂತಹ ರೋಗಗಳನ್ನು ತಡೆಗಟ್ಟಬಹುದಾಗಿದೆ ಎಂದರು. ಶ್ರೀ ಅಬ್ದುಲ್ ರೆಹಮಾನ್ ಸಾಬ್ ಅವರು ನಗರ ಸಭೆಯಿಂದ ಈ ಕಾರ್ಯಕ್ರಮಕ್ಕೆ ಸಂಪೂರ್ಣ ಬೆಂಬಲ ನೀಡುವುದಾಗಿ ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಎಸ್. ವೈ. ರಾಮುಲು ಅವರು ದೇಶದ ಪ್ರತಿಯೊಂದು ಕಡೆಗೂ ಈ ಕಾರ್ಯಕ್ರಮ ಜಾರಿಗೆ ತರಬೇಕು ಎಂದರು. ಶ್ರೀಮತಿ ಸ್ಮಿತ್ ಈ ಸಮಯದಲ್ಲಿ ಶುಭ ಹಾರೈಸಿದರು.

ಸ್ಥಳೀಯ ಸಂಸ್ಥೆ ಅಧ್ಯಕ್ಷ ಗುರುಸಿದ್ದಯ್ಯ ಸ್ವಾಗತಿಸಿದರೆ ಸಹಾಯಕ ಸಂಘಟನಾ ಆಯುಕ್ತ (ಸ್ಕೌ) ಆರ್. ವೆಂಕಣ್ಣ ಸಮಾಜ ಸೇವೆಯ ಗುರಿಯನ್ನು ಕುರಿತು ವಿವರಣೆ ನೀಡಿದರೆ, ಗೊಗ್ಗಾ ಸಿದ್ದರಾಮಯ್ಯ ಅವರು ವಂದನೆ ಸಲ್ಲಿಸಿದರು.

## ದಾಂಡೇಲಿಯಲ್ಲಿ ಸ್ಕೌಟ್ ಗೈಡ್ ಮೇಳ

ಫೆಬ್ರವರಿ ೧೧ ರಂದು ದಾಂಡೇಲಿಯಲ್ಲಿ ಬೆಳಿಗ್ಗೆ ೯ ರಿಂದ ೧೦ ಗಂಟೆಯವರೆಗೆ ಅಲ್ಲಿನ ಸ್ಕೌಟ್ ಮತ್ತು ಗೈಡ್‌ಗಳು ನಗರದಲ್ಲಿ ಶಿಸ್ತಿನಿಂದ ಮೆರವಣಿಗೆ ಹೋಗಿ, ಅಲ್ಲಿನ ಸಮೀಪದಲ್ಲಿರುವ ಅರಣ್ಯ ಭಾಗದ ಕೆಲವು ಗಿಡ ಮರಗಳ ಕೆಳಗೆ ಕುಳಿತು ಸಂಸ್ಥೆಯ ಚಟುವಟಿಕೆಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಪಡೆದರು.

ಡಿ. ಎಸ್. ಪಿ. ಶ್ರೀ ಇಕ್ಬಾಲ್ ಅವರು ಮುಖ್ಯ ಅತಿಥಿಗಳಾಗಿದ್ದರೆ ಕಲೆ, ವಾಣಿಜ್ಯ ಮತ್ತು ವಿಜ್ಞಾನ ಮಹಾವಿದ್ಯಾಲಯದ ಪ್ರಾಂಶುಪಾಲರಾದ ಶ್ರೀ ಎನ್. ಜಿ. ಸಭಾಹಿತ್ ಅಧ್ಯಕ್ಷರಾಗಿದ್ದರು. ಕಾರ್ಯದರ್ಶಿ ಶ್ರೀ ಎನ್. ಸಿ. ನಾಯಕ್ ಅವರು ಸಮ್ಮೇಳನದ ಕಾರ್ಯಕ್ರಮಗಳನ್ನು ನೆರವೇರಿಸಿದರು. ಕಾರ್ಯಕಾರಿ ಸಮಿತಿಯ ಸದಸ್ಯರಿಗೆ ಮೇಳದಲ್ಲಿ ಭಾಗವಹಿಸಲು ಅವಕಾಶ ಮಾಡಲಾಗಿತ್ತು.

ಈ ಕಾರ್ಯಕ್ರಮಕ್ಕೆ ಡಾ॥ ಜಿ. ವಿ. ಭಟ್, ಶ್ರೀಮತಿ ಪ್ರಭಾಕುಲಕರ್ಣಿ, ಪ್ರಾಚಾರ್ಯರಾದ ಜಿ. ಎಸ್. ಗಾಯತ್ರಿ, ಎಂ. ಎಲ್. ಮಹೇಶ್ವರಿ, ಶ್ರೀ ಟಿ. ಟಿ. ಭಟ್ಟ ಮತ್ತು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಪ್ರಾಚಾರ್ಯ ಎಸ್. ಎ. ಭಟ್ ಅವರು ಉಪಸ್ಥಿತರಿದ್ದರು.

ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಶ್ರೀ ಎಂ. ಎಲ್. ಮಹೇಶ್ವರಿ ಸ್ವಾಗತಿಸಿದರೆ, ಪ್ರಾಚಾರ್ಯ

(ಮುಂದಿನ ಪುಟ ನೋಡಿ)

# ರಾಬರ್ಟ್ ಬೇಡನ್ ಪೊವೆಲ್—ಮೇಫ್‌ಕಿಂಗ್ ವೀರ

ವಿ. ಎನ್. ರಾಜಾರಾವ್

ದಕ್ಷಿಣ ಆಫ್ರಿಕದಲ್ಲಿ ಪುನಃ ತೊಂದರೆಯು ಸಂಭವಿಸಿದ್ದರಿಂದ ಬೇಡನ್ ಪೊವೆಲ್‌ರನ್ನು ಅಲ್ಲಿಗೆ ಕಳುಹಿಸಿದರು. ಇಂಗ್ಲೆಂಡಿನ ವಿಹಾರ ಪ್ರದೇಶದಲ್ಲಿ ದೋಣಿಯನ್ನು ನಡೆಸುವ ಜೂಜನ್ನು ನೋಡಲು ಹೋಗಿದ್ದ ಸಮಯದಲ್ಲಿ ಒಮ್ಮೆಗೇ ಅಲ್ಲಿಗೆ ಹೊರಡಬೇಕೆಂದು ಅವರಿಗೆ ತಿಳಿಸಿದರು. ಲಂಡನ್‌ನ ತಮ್ಮ ಮನೆಯಲ್ಲಿ ಅವರು ಯಾವಾಗಲೂ ಹೊರ ಪ್ರಯಾಣಕ್ಕೆ ಬೇಕಾದ ಸಲಕರಣೆಗಳನ್ನು ಅವರು ಸಿದ್ಧವಾಗಿಟ್ಟಿರುತ್ತಿದ್ದರು.

ಮೇಫ್‌ಕಿಂಗ್ (Mafeking) ಎಂಬುದು ದಕ್ಷಿಣ ಆಫ್ರಿಕಾದಲ್ಲಿ ಒಂದು ಸಣ್ಣ ಸ್ಥಳ. ಇದು ಟ್ರಾನ್ಸ್‌ವಾಲ್ (Transwal) ದೇಶದ ಪಶ್ಚಿಮದ ಗಡಿಯಿಂದ ಏಳು ಮೈಲಿ ದೂರದಲ್ಲಿದೆ. ಬೋಯರ್ ಜನಗಳು (Boers) ಇದನ್ನು ತಾವು ಸ್ವಾಧೀನಪಡಿಸಿಕೊಳ್ಳಬೇಕೆನ್ನುತ್ತಿದ್ದರು.

ಅಲ್ಲಿ ಹಲವು ಅಂಗಡಿಗಳು ಇದ್ದುದರಿಂದ ದೊಡ್ಡ ಕೊಳ್ಳೆ ಸಿಕ್ಕುತ್ತೆಂಬ ಆಸೆ. ಅಲ್ಲದೆ ರ್ಹೊಡೇಸಿಯ (Rhodesia) ಮುಂತಾದ ಸ್ಥಳಗಳಿಗೆಲ್ಲಾ ಇದು ಮಧ್ಯ ಪ್ರದೇಶ. ಬೋಯರರೊಡನೆ ಯುದ್ಧಾರಂಭವಾಗುವುದಕ್ಕೆ ಕೆಲವು ದಿನಗಳು ಮುಂಚೆ ಬೇಡನ್ ಪೊವೆಲ್ ಅಲ್ಲಿಗೆ ಬಂದರು. ಮೇಫ್‌ಕಿಂಗ್‌ನಲ್ಲಿದ್ದ ರಕ್ಷಕರೇ ಮೊದಲಾದವರೆಲ್ಲರೂ ಸೇರಿ ಸುಮಾರು ೯೦೦ ಜನರು ಮಾತ್ರವಿದ್ದರು. ಇವರು ಸಹಸ್ರಾರು ಬೋಯರ್‌ಗಳನ್ನು ಎದುರಿಸಬೇಕಾಗಿತ್ತು. ಒಳಗಿದ್ದವರ ಬಳಿಯಲ್ಲಿ ಹಳೆಯ ಬಂದೂಕಗಳಿದ್ದವು. ಬೋಯರರ ಬಳಿಯಲ್ಲಾದರೋ ಅತ್ಯುತ್ತಮವಾದ ಫಿರಂಗಿಗಳಿದ್ದವು. ಆದರೆ ಮೇಫ್‌ಕಿಂಗ್‌ನ ರಕ್ಷಕರಿಗೆ ಬೇಡನ್ ಪೊವೆಲ್ ಸೈನ್ಯಾಧಿಪತಿ. ಅವರು ಪ್ರಸನ್ನ ಮುಖವುಳ್ಳ, ಧೈರ್ಯದಿಂದ ಕೂಡಿದ ಮತ್ತು ಯುದ್ಧ ಮಾಡುವುದರಲ್ಲಿ ಚತುರರಾದ ನಾಯಕ. ಇಂತಹವರು ಸೈನ್ಯಾಧಿಪತಿಯಾದುದು ಸುದೈವ! ಇವರು ಸ್ವಯಂ ಸೇವಕರಿಗೆ ಕುದುರೆ ಸವಾರಿ ಮಾಡುವುದು, ಗುಂಡು ಹಾರಿಸುವುದು, ಹಗೆಗಳಿಂದ ಉಪಾಯವಾಗಿ ತಪ್ಪಿಸಿಕೊಳ್ಳುವುದು ಈ ವಿಷಯಗಳಲ್ಲೆಲ್ಲಾ ಶಿಕ್ಷಣ ಕೊಟ್ಟರು. ಪಟ್ಟಣದ ಹೊರಗಡೆ ಬಂದು ಸಣ್ಣ ರೈಲ್ವೆಯನ್ನು ಏರ್ಪಡಿಸಿ ಅಲ್ಲಿ ಮದ್ದಿನ ರೈಲುಗಾಡಿ ಸುತ್ತಾಡುವಂತೆ ಮಾಡಿದರು. ಬಿದ್ದು ಹೋಗುತ್ತಿದ್ದ ಹಳೆಯ ಕೋಟೆಗಳನ್ನು ಭದ್ರಪಡಿಸಿದರು.

ಯುದ್ಧವಾರಂಭವಾದೊಡನೆಯೇ ಮೇಫ್‌ಕಿಂಗ್ ಬಳಿ ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿದರು. ರೈಲು ದಾರಿಯನ್ನು ಕಿತ್ತುಹಾಕಿದರು. ಕೇಫ್ ಟೌನ್‌ನಿಂದ ೮೨೦ ಮೈಲಿಗಳ ಮತ್ತು ಕಿಂಬರ್ಲಿಯಿಂದ (Kimberly) ೨೫೦ ಮೈಲಿಗಳ ದೂರದಲ್ಲಿರುವ ಈ ಸಣ್ಣ ಪಟ್ಟಣಕ್ಕೂ ಹೊರ ಪ್ರಪಂಚಕ್ಕೂ ಸಂಬಂಧವೇ ತಪ್ಪಿತು. ಆದುದರಿಂದ ಅಸಹಾಯರಾಗಿ ಮೇಫ್‌ಕಿಂಗ್‌ನವರು ಬೋಯರರೊಡನೆ ಹೋರಾಡಿ ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಬೇಕಾದ ಸಮಯವು ಬಂದೊದಗಿತು.

---

ಹಿಂದಿನ ಪುಟದಿಂದ

ಎಸ್. ಎ. ಭಟ್ ಅವರು ಅತಿಥಿಗಳ ಪರಿಚಯ ಮಾಡಿ ಮಾಲಾರ್ಪಣೆ ಮಾಡಿದರು.

ಮುಖ್ಯ ಅತಿಥಿಗಳಾದ ಶ್ರೀ ಇಕ್ಬಾಲ್ ಅವರು ಮಕ್ಕಳನ್ನುದ್ದೇಶಿಸಿ ಮಾತನಾಡುತ್ತಾ ಶಿಸ್ತಿನ ನಿಜವಾದ ರೂಪ ಸ್ಕೌಟ್ಸ್ ಮತ್ತು ಗೈಡ್ಸ್ ಎಂದು ಹೇಳಿ ಸ್ವಶಿಸ್ತು ಶಾಶ್ವತವಾದದ್ದು ಎಂದರು.

ಅಧ್ಯಕ್ಷತೆ ವಹಿಸಿದ್ದ ಪ್ರಾಚಾರ್ಯ ಶ್ರೀ ಎನ್. ಜಿ. ಸಭಾಹಿತ್ ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಆಂದೋಲನವು ಒಂದು ಪವಿತ್ರವಾದ ಸಂಘಟನೆ ಮತ್ತು ಸೇವಾ ಭಾವನೆ ಉಳ್ಳದ್ದು ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಸ್ಕೌಟ್ಸ್ ಮತ್ತು ಗೈಡ್ಸ್ ಅನೇಕ ಕಾರ್ಯಕ್ರಮಗಳನ್ನು ಸಂಯೋಜಿಸಿದ ನಂತರ, ಸ್ಕೌಟ್ ಮಾಸ್ಟರ್ ಎಸ್. ಎಫ್. ಗಾವಕರ್ ಅವರು ವಂದನೆ ಸಲ್ಲಿಸಿದರು.

ಬೇಡನ್ ಪೊವೆಲ್ ಈ ಪಟ್ಟಣವನ್ನು ಪ್ರವೇಶಿಸಿದೊಡನೆಯೇ ಅದನ್ನು ಸರಿಯಾದ ರಕ್ಷಣೆಯಲ್ಲಿಟ್ಟು, ಅದರ ಸುತ್ತಲೂ ಕಂದಕಗಳನ್ನು ತೋಡಿಸಿದರು. ಇದ್ದ ಸ್ವಲ್ಪ ಜನರೇ ಈ ಕಂದಕವನ್ನು ರಕ್ಷಿಸಬೇಕಾಗಿತ್ತು. ಪಟ್ಟಣದೊಳಗೆ ಬಹಳ ಕಷ್ಟದಿಂದ ಸಾಧ್ಯವಾದಷ್ಟು ಆಹಾರ ಸಾಮುಗ್ರಿಗಳನ್ನು ಶೇಖರ ಮಾಡಿಟ್ಟಿದ್ದರು. ದನಗಳಿಗೆ ಹುಲ್ಲುಮೇಯುವುದಕ್ಕೂ, ಜನಗಳಿಗೆ ವಾಸಿಸುವುದಕ್ಕೂ ತಕ್ಕಷ್ಟು ಸ್ಥಳವನ್ನು ಭದ್ರಪಡಿಸಿಕೊಳ್ಳಲು ಬೇಡನ್ ಪೊವೆಲ್ ಶತ್ರುಗಳನ್ನು ದೂರ ಕಳುಹಿಸಬೇಕಾಯಿತು. ಆದಕಾರಣ ಬೋಯರರು ಮೇಲೆ ಬೀಳದೆ ದೂರವಾಗಿರುವಂತೆ ಉಪಾಯವಾಗಿ ಅವರು ಏರ್ಪಾಡು ಮಾಡಿದರು.

ಮುತ್ತಿಗೆ ಪ್ರಾರಂಭವಾದಾಗ ಸುರಂಗಗಳನ್ನು ತುಂಬಿದ್ದ ಎರಡು ಗಾಡಿಗಳನ್ನು ದೂರವಾಗಿ ಬೇಡನ್ ಪೊವೆಲ್ ನಿಲ್ಲಿಸಿದ್ದರು. ಬೋಯರರು ಇವುಗಳನ್ನು ಆಯುಧದ ಗಾಡಿಗಳೆಂದು ಊಹಿಸಿ ಇವುಗಳ ಮೇಲೆ ಗುಂಡನ್ನು ಹಾರಿಸಿದರು. ತಕ್ಷಣ ಭಯಂಕರವಾಗಿ 'ದಢಾರ್' ಎಂದು ಶಬ್ಧವಾಯಿತು. ಗಣಿಗಳಿವೆ ಎಂದು ಶತ್ರುಗಳು ಭೀತರಾದರು. ಬೋಯರರು ಸಂಖ್ಯೆಯಲ್ಲಿ ಹೆಚ್ಚಾಗಿದ್ದರು. ಭಾರಿಯಾದ ಬಂದೂಕಗಳು ಅವರ ಬಳಿಯಲ್ಲಿದ್ದವು. ಅವರಂತೂ ಮೇಲೆ ಬಿದ್ದು ಮುಂದುವರಿದಿದ್ದರೆ ನಿಜವಾಗಿಯೂ ಅವರಿಗೆ ಜಯವಾಗುತ್ತಿತ್ತು. ಆದರೆ ಏನು ಅಪಾಯ ಸಂಭವಿಸುವುದೋ ಎಂದು ಅವರಿಗೆ ಭಯ, ಮುತ್ತಿಗೆ ಹಾಕಿ ಮೆಲ್ಲಗೆ ಕೋಟೆಯನ್ನು ಹಿಡಿಯುವುದು ಕ್ಷೇಮಕರವೆಂದು ಅವರು ನಿರ್ಧರಿಸಿದರು. ಬೋಯರರ ಸೈನ್ಯಾಧಿಪತಿಯು ಮೇಫ್‌ಕಿಂಗ್‌ನಲ್ಲಿದ್ದವರನ್ನು ಕುರಿತು 'ರಕ್ತಪಾತವನ್ನು ತಪ್ಪಿಸಲು ಸುಮ್ಮನೆ ಶರಣಾಗತರಾಗಿ' ಎಂದು ಹೇಳಿ ಕಳುಹಿಸಿದನು. ಇದಕ್ಕೆ 'ರಕ್ತಪಾತವಿನ್ನೂ ಪ್ರಾರಂಭವಾಗಲಿಲ್ಲವೇಕೆ ? ಏತಕ್ಕೋಸ್ಕರ ನಾನು ಶರಣಾಗತನಾಗಬೇಕು ?' ಎಂದು ಬೇಡನ್ ಪೊವೆಲ್ ನಿರ್ಭಯವಾಗಿ ಉತ್ತರವಿತ್ತರು.

ಒಂದು ರಾತ್ರಿ ಬ್ರಿಟಿಷ್ ಸೈನಿಕರು ಪಟ್ಟಣದ ಪೂರ್ವಭಾಗದಲ್ಲಿ ಈಟಿಗಳನ್ನು ತೆಗೆದುಕೊಂಡು ಹೊರಬಿದ್ದು ಬೋಯರರನ್ನು ಬಹುವಾಗಿ ಬೆದರಿಸಿ ಅವರಲ್ಲಿ ಅನೇಕರನ್ನು ಕೊಂದರು. ಈ ಸಣ್ಣ ಪಟ್ಟಣಕ್ಕೇನೋ ಬಹು ನಷ್ಟವಾಯಿತು. ಬೋಯರರು ಒಂದು ದೊಡ್ಡ ಗುಂಡನ್ನು ಹಾರಿಸಿದರು. ಇದರಿಂದ ಹಾವಳಿಯೂ, ನಾಶವೂ ಆಯಿತು. ಭಾನುವಾರದ ದಿನ ಮಾತ್ರ ಶತ್ರುಗಳು ತುಪಾಕಿಯನ್ನು ಹಾರಿಸುತ್ತಿರಲಿಲ್ಲ. ಉಳಿದ ದಿನಗಳಲ್ಲೆಲ್ಲಾ ಗುಂಡಿನೇಟಿನ ಅವಾಂತರವು ನಿಲ್ಲುತ್ತಲೇ ಇರಲಿಲ್ಲ. ಮುತ್ತಿಗೆಯ ಕಾಲವು ಮುಂದುವರಿದಂತೆಲ್ಲಾ ಜನರಿಗೆ ಆಹಾರವು ಸಿಕ್ಕುವುದು ಕಷ್ಟವಾಯಿತು. ಎಂದಿನಂತೆ ನೀರು ಒದಗದ ಹಾಗೆ ಶತ್ರುಗಳು ಅಡಚಣೆಯನ್ನುಂಟು ಮಾಡಿದ್ದರು. ಹತ್ತಿರದ ನದಿಯ ಬಳಿ ಇರುವ ಭಾವಿಗಳಿಂದ ತರುವ ನೀರು ಸಾಲಲಿಲ್ಲ. ಈಗ ಬೋಯರ್ ಸೈನ್ಯಾಧಿಪತಿಯು ಬೇಡನ್ ಪೊವೆಲ್‌ರನ್ನು ಕುರಿತು ಸುಮ್ಮನೆ ಶರಣಾಗತಿ ಕ್ಷೇಮವೆಂದು ಎರಡು ವೇಳೆ ಹೇಳಿ ಕಳುಹಿಸಿದನು. ಆದರೆ ಬೇಡನ್ ಪೊವೆಲ್ ತಮ್ಮ ಸ್ವಾಭಾವಿಕವಾದ ಧೈರ್ಯದಿಂದ 'ನಿಮ್ಮೊಡನೆ ನಮ್ಮ ಹೋರಾಟವು ಇನ್ನೂ ಸಾಲದು ನಮಗಿನ್ನೂ ತೃಪ್ತಿಯಿಲ್ಲ' ಎಂದು ಮೊದಲು ಹೇಳಿ, ನಂತರ ಬೋಯರರು ತಮ್ಮ ಆಯುಧಗಳನ್ನು ಕೆಳಗಿಟ್ಟರೆ ತಾವು ಸಾಹಸ ಮಾಡಿ ಅವರ ಮರ್ಯಾದೆಗೆ ತಕ್ಕಂತೆ ಸಂಧಿ ಮಾಡಲು ಪ್ರಯತ್ನಿಸುವೆ ಎಂದು ನಗುತ್ತಲೇ ಹೇಳಿ ಕಳುಹಿಸಿದರು.

ಆ ವರ್ಷದ ಕೊನೆಯಲ್ಲಿ ಭಯಂಕರವಾದ ಗುಡುಗು, ಮಿಂಚುಗಳಿಂದ ಕೂಡಿದ ಬಿರುಗಾಳಿಯ ಹೊಡೆತ, ಅಗಾಧವಾದ ಮಳೆ ಇವುಗಳಿಂದ ಪಟ್ಟಣದಲ್ಲಿ ಬಹಳ ತೊಂದರೆಯಾಯಿತು ಕಂದಕದ ಬಳಿಯಲ್ಲಿದ್ದ ರಕ್ಷಕರು ಪ್ರವಾಹಕ್ಕೆ ಸಿಕ್ಕಿಬಿದ್ದರು. ಶೀತದಿಂದಲೂ, ಕೆಟ್ಟ ಆಹಾರದಿಂದಲೂ ಉಂಟಾದ ಜ್ವರವು ತಗುಲಿ ಕೆಲವರು ಸತ್ತರು. ನಿರೀಕ್ಷಿಸಿದ ಸಹಾಯವು ಬಂದೊದಗಲಿಲ್ಲ. ಪಟ್ಟಣದ ಉತ್ತರ ಭಾಗದ ಕಡೆ, ಬೋಯರರ ಮೇಲೊಂದು ಸೈನ್ಯವು ಹಲ್ಲೆ ಹಾಕಿತು. ಆದರೆ ಇದರಲ್ಲಿ ಮೇಫ್‌ಕಿಂಗ್‌ನ ಅನೇಕ ಧೈರ್ಯಶಾಲಿಗಳು ಮರಣ ಹೊಂದಿದರು. ಹೀಗಾಗಲು ಮೇಫ್‌ಕಿಂಗ್‌ನವರೇ ಕೆಲವರು ದ್ರೋಹದಿಂದ ಶತ್ರುಗಳಿಗೆ ಒಳ ವಿಷಯಗಳನ್ನು ತಿಳಿಸಿದುದೇ ಕಾರಣ. ಇದನ್ನು ತಿಳಿದು ಬೋಯರರು ಮೊದಲಿನ ಎರಡರಷ್ಟು ದಂಡನ್ನು ಕೋಟೆಯ ಮುತ್ತಿಗೆಗಾಗಿಟ್ಟರು.

ಬೆಳಿಗ್ಗೆ ಮುಂಜಾನೆಯೇ ಬ್ರಿಟಿಷ್ ಸೈನ್ಯವು ಮೇಲೆ ಬೀಳಲು ಹೊರಟಾಗ ಮುಂದೆ ಬಿಸಿಯಾದ ಉರಿಯು

ಅವರನ್ನೆದುರಿಸಿತು. ಆಗ ಅವರು ಬಹು ಸಾಹಸದಿಂದಲೂ, ಧೈರ್ಯದಿಂದಲೂ ಕೋಟೆಯ ಗೋಡೆಗಳವರೆಗೂ ಓಡಿಹೋದರು. ಕೆಲವರು ಆ ಗೋಡೆಗಳಲ್ಲಿದ್ದ ಕಂಡಿಗಳ ಮೂಲಕ ಬಂದೂಕಗಳನ್ನಿಟ್ಟು ಹಾರಿಸಿದರು. ಆದರೆ ಬೋಯರರ ಭಯಂಕರವಾದ ಗುಂಡಿನ ಪೆಟ್ಟಿನ ಮುಂದೆ ಇವೆಲ್ಲಿಯವೊ! ಶತ್ರುಗಳ ಹೊಡೆತದ ಪೆಟ್ಟನ್ನು ತಡೆಯುವುದು ಇವರಿಗೆ ಅಸಾಧ್ಯವಾಯಿತು. ಬ್ರಿಟಿಷರಲ್ಲಿ ಕೆಲವರು ಹಿಂದಕ್ಕೂ ಬಿದ್ದುಬಿಟ್ಟರು. ಈ ಯೋಧರ ಗುಂಪಿನಲ್ಲಿ ಉಳಿದವರೆಲ್ಲರೂ ಈ ರಣರಂಗದಲ್ಲಿ ಬಿದ್ದಿದ್ದ ಒಡನಾಡಿಗಳನ್ನು ಬಿಟ್ಟು ಹಿಂತಿರುಗಿದರು.

ಹಣ ಸಾಲದೆ ತೊಂದರೆಯಾಯಿತು. ಇದರ ನಿವಾರಣೆಗಾಗಿ ಬೇಡನ್ ಪೊವೆಲ್ ಕಾಗದದ ನೋಟುಗಳನ್ನು ಚಲಾವಣೆಗೆ ತಂದರು. ಸೈನಿಕರಿಗೆ ಆಹಾರವನ್ನೊದಗಿಸಲು ತಕ್ಕ ಅನುಕೂಲಗಳನ್ನುಂಟುಮಾಡಿದರು. ಮದ್ದಿನ ಕಾರ್ಖಾನೆಯೊಂದನ್ನು ಏರ್ಪಡಿಸಿದರು. ತಮ್ಮ ಜನಗಳ ಆರೋಗ್ಯ ಉತ್ಸಾಹ ಇವುಗಳಿಗೆ ಯಾವ ಕುಂದೂ ಬಾರದಂತೆ ಜೂಜುಗಳು, ಆಟಪಾಟಗಳು ಇವುಗಳಿಗೆ ಅವಕಾಶವನ್ನೊದಗಿಸಿದರು. ಅಲ್ಲದೆ ಬೇಡನ್ ಪೊವೆಲ್‌ರ ಭಾವ ಚಿತ್ರವನ್ನುಳ್ಳ ಅಂಚೆಯ ಚೀಟಿಗಳನ್ನು (Postal Stamps) ಪಟ್ಟಣದೊಳಗೆ ಮಾತ್ರ ಉಪಯೋಗಿಸುವಂತೆ ಏರ್ಪಾಡಾಯಿತು.

ಇದಾದ ಬಹುಕಾಲ ಏನೂ ಹೆಚ್ಚು ಸಂಗತಿ ನಡೆಯಲಿಲ್ಲ. ಕೆಲವು ಬೋಯರ್ ಸೈನಿಕರನ್ನು ಹಿಂದಕ್ಕೆ ಕರೆಯಿಸಿಕೊಂಡರು. ಬೇಡನ್ ಪೊವೆಲ್ ಬಹು ಸಾಹಸ ಮಾಡಿ ಶತ್ರು ಪಕ್ಷದವರಲ್ಲಿ ಉಳಿದವರನ್ನು ಪಟ್ಟಣದಿಂದ ಸ್ವಲ್ಪ ದೂರ ಹಿಮ್ಮೆಟ್ಟುವಂತೆ ಮಾಡಿದರು. ಆದರೂ ಬಂದೂಕನ್ನು ಉಡಾಯಿಸುವುದು ಮಾತ್ರ ಕಡಿಮೆಯಾಗಲಿಲ್ಲ. ಕೋಟೆಯ ರಕ್ಷಕರಿಗೆ ಜ್ವರದಿಂದ ದುಷ್ಪರಿಣಾಮವುಂಟಾಗುತ್ತಿತು.

ಇಷ್ಟರಲ್ಲಿಯೇ ದಕ್ಷಿಣದಿಂದ ಕೋಟೆಯ ರಕ್ಷಕರ ಸಹಾಯಕ್ಕಾಗಿ ಒಂದು ಹೊಸ ಸೈನ್ಯವು ಬರುತ್ತದೆ ಎಂಬ ವರ್ತಮಾನವು ಬೋಯರ್‌ರಿಂದ ಮುಟ್ಟಿತು. ಒಡನೆಯೇ ಅನುಕೂಲವಾದ ಕಡೆಯಿಂದ ಪ್ರವೇಶಿಸಿ ಬೋಯರರು ಮೇಫ್‌ಕಿಂಗಿಗೆ ಬೆಂಕಿ ಹಚ್ಚಿ ಬ್ರಿಟಿಷರು ಆಕ್ರಮಿಸಿದ್ದ ಸ್ಥಳದಲ್ಲಿ ನಟ್ಟನಡುವೆ ಬೇಗ ಮುಂದುವರಿದರು. ಸ್ವಲ್ಪ ಜನಗಳೇ ರಕ್ಷಿಸುತ್ತಿದ್ದ ಈ ಕೋಟೆಯನ್ನು ಹಿಡಿದುದರಿಂದ ಅದು ತಮ್ಮದಾಯಿತೆಂದು ಬೋಯರರು ತಿಳಿದರು. ಆದರೆ ಬೇಡನ್ ಪೊವೆಲ್‌ರ ಯುಕ್ತಿಯಿಂದ ಬ್ರಿಟಿಷರು ಶತ್ರು ಸೈನ್ಯವನ್ನು ಮುತ್ತಿದರು. ಒಳಗೆ ಸಿಕ್ಕಿಬಿದ್ದಿದ್ದ ಬೋಯರ್ ಮುಖಂಡನು ಹೊರಗೆ ತಪ್ಪಿಸಿಕೊಂಡು ಬರಲಾರದಂತಾದನು. ಹಗಲೆಲ್ಲಾ ಬ್ರಿಟಿಷರು ಬಂದೂಕನ್ನು ಹಾರಿಸಿದರು. ಇದನ್ನು ಸಹಿಸಲಾಗದೆ ಬೋಯರರು ಕೋಟೆಯ ಅಧಿಕಾರಿಗಳಿಗೆ ಶರಣಾಗತರಾದರು. ಅನೇಕ ಜನ ಬೋಯರರನ್ನು ಬಂಧಿಗಳನ್ನಾಗಿ ಹಿಡಿದು ಹಾಕಲಾಯಿತು.

## ಕರ್ತವ್ಯ ನಿಷ್ಠೆ

ಈ ಮಧ್ಯೆ ಒಂದು ಸಾಹಸ ಸಂಗತಿಯೂ ನಡೆಯಿತು. ಬ್ರಿಟಿಷರೂ, ಬೋಯರರೂ, ಒಬ್ಬರ ಮೇಲೊಬ್ಬರು ತೋಪು ಹಾರಿಸುತ್ತಿದ್ದಾಗ ಬೇಡನ್ ಪೊವೆಲ್‌ರ ದೂತನೊಬ್ಬನು ಮೈದಾನಕ್ಕೆ ಹೋಗಿ ಬೋಯರರಿದ್ದ ಕಡೆಗೆ ಕುದುರೆಯ ಸವಾರಿ ಮಾಡಿಕೊಂಡು ಹೊರಟಿದ್ದನು. ತಾನು ಶಾಂತಿಗೋಸ್ಕರ ಬರುತ್ತಿರುವ ರಾಯಭಾರಿಯೆಂದು ತನ್ನ ಬಿಳಿದಾದ ಕರವಸ್ತ್ರವನ್ನೆತ್ತಿ ಸೂಚಿಸುತ್ತಿದ್ದರೂ ಶತ್ರುಗಳು ಅವನ ಕಡೆಗೆ ತುಫಾಕಿಯನ್ನು ಹಾರಿಸಿದರು. ಆದರೂ ಅವನು ಅವರಿದ್ದೆಡೆಗೆ ಹೋಗುತ್ತಿದ್ದನು. ಹೀಗೆಯೇ ಹೋಗುತ್ತಿರುವಾಗ ಆಕಸ್ಮಿಕವಾಗಿ ಅವನ ಕುದುರೆಯು ಬಸವಳಿದು ಕೆಳಗೆ ಬಿದ್ದು ಸತ್ತಿತ್ತು. ಆದರೂ ಧೈರ್ಯಗೆಡದೆ ದೂತನೆದ್ದು ನಡೆದುಕೊಂಡೇ ಹೋದನು. ಹೋಗುವುದಾದರೂ ಎಲ್ಲಿಗೆ ? ತನಗೆದುರಾಗಿಯೇ ಗುಂಡುಹಾರಿಸುತ್ತಿದ್ದ ಶತ್ರುಗಳ ಕಡೆಗೆ ಒಬ್ಬನೇ ತಮ್ಮನ್ನೆದುರಿಸಿ ಬರುತ್ತಿದ್ದನೆಂಬುದನ್ನೂ ಲಕ್ಷ್ಯ ಮಾಡದೆ ಶತ್ರುಗಳು ತುಫಾಕಿ ಹಾರಿಸುವುದನ್ನು ನಿಲ್ಲಿಸಲೇ ಇಲ್ಲ. ಕಟ್ಟಕಡೆಗೆ ಈ ಪೆಟ್ಟುಗಳನ್ನು ತಡೆಯಲಾರದೆ. ದೂತನು ತಲೆ ತಿರುಗಿ ಗಾಯವನ್ನು ಹೊಂದಿ ಕೆಳಗೆ ಬಿದ್ದುಬಿಟ್ಟನು. ಪಕ್ಕದಲ್ಲಿಯೇ ಅಡಗಿಕೊಂಡಿದ್ದ ಇಬ್ಬರು ಬ್ರಿಟಿಷರು ಈಚೆಗೆ ಬಂದು ಅವನನ್ನು ಕಟ್ಟಡದ ಹಿಂಭಾಗಕ್ಕೆ ತೀವ್ರವಾಗಿ ಎಳೆದುಕೊಂಡು ಹೋದರು. ಆದರೆ ಅವನಿಗೆ ವಿಪರೀತ ಗಾಯವಾಗಿತ್ತು. ಮರಣ ಕಾಲ ಸಮೀಪಿಸಿತು. ಆಗ ದೂತನು ತನ್ನನ್ನು ರಕ್ಷಿಸಲು ಬಂದವರಿಗೆ 'ಬೋಯರರಿಗೆ ಸಂದೇಶವನ್ನೊಯ್ಯಲು

ನಾನು ಬಹಳ ಕಷ್ಟಪಟ್ಟೆನೆಂದೂ, ಅಲ್ಲಿಗೆ ಹೋಗಿ ಸೇರುವುದರೊಳಗಾಗಿ ಅವರು ನನ್ನನ್ನು ಗುಂಡಿನಿಂದ ಹೊಡೆದು ಕೊಂದುಹಾಕಿದರೆಂದು ನಮ್ಮ ಕರ್ನಲ್ ಸಾಹೇಬರಿಗೆ ತಿಳಿಸಿ' ಎಂದು ಕಡೆಯ ನುಡಿಗಳನ್ನಾಡಿದನು. ತಾನು ಕೈಗೊಂಡಿದ್ದ ಕೆಲಸವು ಬಹು ಅಪಾಯಕರವಾದುದೆಂದು ದೂತನಿಗೆ ಚೆನ್ನಾಗಿ ಗೊತ್ತಿತ್ತು. ಆದರೂ ಎದೆಗುಂದದೆ ಕರ್ತವ್ಯ ನಿಷ್ಠನಾಗಿ ಆನಂದದಿಂದ ಆತನು ಪ್ರಾಣವನ್ನು ಸಮರ್ಪಣೆ ಮಾಡಿದನು. ಈ ರೀತಿಯಾದ ಭಾವನೆಯು ಸೈನಿಕರಲ್ಲಿ ಬೇರೂರುವುದಕ್ಕೆ ಬೇಡನ್ ಪೊವೆಲ್‌ರ ಅಭಿಮಾನ, ಪ್ರೋತ್ಸಾಹ ಮತ್ತು ಘನವಾದ ರೀತಿಯಲ್ಲಿ ಅವರು ಕೊಡುತ್ತಿದ್ದ ಶಿಕ್ಷಣ ಇವುಗಳೇ ಕಾರಣ.

೨೧೮ ದಿನಗಳಾದ ಮೇಲೆ ಮೇಫ್‌ಕಿಂಗ್ ಪಟ್ಟಣವು ಶತ್ರುಗಳ ಮುತ್ತಿಗೆಯಿಂದ ಬಿಡುಗಡೆ ಮಾಡಲ್ಪಟ್ಟಿತು. ಇಷ್ಟು ದೀರ್ಘಕಾಲ ಎದುರಿಸಿ ನಿಂತು ಕೋಟೆಯನ್ನು ರಕ್ಷಣೆ ಮಾಡಿದುದೆಲ್ಲಾ ಬೇಡನ್ ಪೊವೆಲ್‌ರ ಬೇಸರವಿಲ್ಲದ ಉತ್ಸಾಹ, ಎಂದಿಗೂ ಅಳಿಯದ ಜಾಗರೂಕತೆ, ಉಚ್ಚವಾದ ಜಾಣತನ ಮತ್ತು ಸೈನ್ಯದವರ ನಿಬಿಡವಾದ ಧೈರ್ಯ—ಇವುಗಳಿಂದಲೇ ಸಾಧ್ಯವಾಯಿತು. ಎಲ್ಲವೂ ಮುಗಿದಮೇಲೆ ಬೇಡನ್ ಪೊವೆಲ್‌ರು ಸೈನಿಕರನ್ನೆಲ್ಲಾ ಕುರಿತು ಹೀಗೆ ಹೇಳಿದರು—

## ಕೃತಜ್ಞತೆ

"ಈ ಮುತ್ತಿಗೆಯ ಕಾಲದಲ್ಲಿ ನಾವು ಒಂದು ಸುಖವಾದ ಸಂಸಾರಕ್ಕೆ ಸೇರಿದವರಂತಿದ್ದೆವು. ಈಗ ನಾವು ಬೇರೆ ಬೇರೆಯಾಗಿ ಚದರಬೇಕಾದ ಕಾಲವು ಬಂದೊದಗಿದೆ. ನಾವು ಈ ದೊಡ್ಡ ಕೆಲಸಕ್ಕೆ ಕೈ ಹಚ್ಚಿದೊಡನೆಯೇ ನಾನು ನಿಮ್ಮೊಡನೆ 'ಬಿಗಿಯಾಗಿ ಕುಳಿತು ನೆಟ್ಟಗೆ ತೋಪು ಹಾರಿಸಿ' ಎಂದೆನು. ಈ ರೀತಿ ಮಾಡಿದುದರಿಂದಲೇ ಈಗ ನಮಗೆ ಇಂತಹ ಸ್ತೋತ್ರಾರ್ಹವಾದ ಜಯವು ಕೈಸೇರಿತು. ನಮ್ಮ ದೇಶದಲ್ಲಿ ನನ್ನ ವಿಷಯದಲ್ಲಿ ಬಹಳ ಒಳ್ಳೆಯ ಮಾತುಗಳನ್ನಾಡಿದ್ದಾರೆ—ಹಡಗಿಗೆ ಬರೀ ಹೆಸರಿಗೆ ಮಾತ್ರ ಯಜಮಾನನಾಗುವುದು (Figurehead) ಬಹು ಸುಲಭ ದಂಡಿನವರೇ ಮೇಫ್‌ಕಿಂಗ್ ಎಂಬ ಹಡಗಿನ ಹಗ್ಗ ಹೊರಜಿಗಳು, ಹಡಗಿನ ಪಟಗಳು. ಸಮುದ್ರದಲ್ಲಿ ಸಂಚಾರ ಮಾಡುತ್ತಾ ಬಿರುಗಾಳಿಯಲ್ಲಿಯೂ ಅವರಿಂದಲೇ ಈ ಹಡಗು ಸುಖವಾಗಿ ಈಗ ತೀರಕ್ಕೆ ಬಂದು ಸೇರಿದೆ."

ಎಂತಹ ಸ್ವಪ್ರತಿಷ್ಠಾರಹಿತವಾದ, ಕೃತಜ್ಞತೆಯಿಂದ ತುಂಬಿದ ಉತ್ತೇಜಕ ನುಡಿಗಳಿವು ! ಆಗಿನ ಸಂದರ್ಭದಲ್ಲಿ ಈ ನುಡಿಗಳನ್ನಾಡಿರುವ "ಮೇಫ್‌ಕಿಂಗ್‌ನ ವೀರ" ಎಂದು ಪ್ರಸಿದ್ಧಿ ಪಡೆದ ಬೇಡನ್ ಪೊವೆಲ್‌ರನ್ನು ಇಂದು ಲಕ್ಷಾಂತರ ಜನರು ಮೇಲ್ಪಂಕ್ತಿಯಾಗಿ ಇಟ್ಟುಕೊಂಡು ಅವರ ಬೋಧನೆಗಳನ್ನು ಅನುಸರಿಸುತ್ತಿದ್ದಾರೆ.

## ಉತ್ಸಾಹ ಸಮಾರಂಭಗಳು

ಹಗಲೂ ರಾತ್ರಿಯೂ ಕ್ಷಣ ಬಿಡುವಿಲ್ಲದೆ ಕಷ್ಟ, ಅತ್ಯಲ್ಪ ಆಹಾರ ಸಾಮಗ್ರಿಗಳು, ಅಪಾರ ಜವಾಬ್ದಾರಿ, ಎಡಬಿಡದ ಆತಂಕ, ಬಾಹ್ಯ ಪ್ರಪಂಚದೊಡನೆ ಸಂಪರ್ಕರಾಹಿತ್ಯ— ಈ ಸ್ಥಿತಿಯಲ್ಲಿ ಏಳು ತಿಂಗಳಕಾಲ ಕಷ್ಟಪಟ್ಟು ಸ್ವಪ್ನಾವಸ್ಥೆಯಿಂದ ಎದ್ದಂತೆ ಬೇಡನ್ ಪೊವೆಲ್ ಹೊರಗೆ ನೋಡಿದರು. ಪ್ರಪಂಚವೇ ಇವರನ್ನು ವೀರ ಎಂದು ಹೊಗಳುತ್ತಿತ್ತು. ಈ ಮಹಾಕಾರ್ಯ ಸಾಧನೆ ಮಾಡಿದುದಕ್ಕಾಗಿ ಇವರಿಗೆ ಮೇಜರ್ ಜನರಲ್ ಪದವಿಯನ್ನಿತ್ತರು. 'ನೀವು ನಿಮ್ಮ ಕೆಲಸವನ್ನು ಉತ್ಕೃಷ್ಟವಾಗಿ ಮಾಡಿರುವಿರಿ. ನಿಮಗೆ ಮೇಫ್‌ಕಿಂಗ್‌ನಲ್ಲಾದ ಜಯದ ವಾರ್ತೆಯು ನನಗೆ ತಿಳಿದೊಡನೆಯೇ ನಿಮಗೆ ಬಡತಿ (Promotion) ಕೊಡಬೇಕೆಂದು ಬಹಳ ಸಂತೋಷದಿಂದ ವಿಕ್ಟೋರಿಯ ಮಹಾರಾಣಿಯವರಿಗೆ ಶಿಫಾರಸು ಮಾಡಿದೆನು. ನಿಮ್ಮ ಪುರೋವೃದ್ಧಿಯು ಇದಕ್ಕೂ ಇಮ್ಮಡಿಯಾಗಿರುವುದು' ಎಂದು ಲಾರ್ಡ್ ವುಲ್‌ಸ್ಲಿಯವರು ಬೇಡನ್ ಪೊವೆಲ್‌ರಿಗೆ ಬರೆದರು.

ಇಷ್ಟರಲ್ಲಿಯೇ ಮೇಫ್‌ಕಿಂಗ್‌ನ ಜಯವಾರ್ತೆಯು ಇಂಗ್ಲೆಂಡಿನಲ್ಲೆಲ್ಲಾ ಹಬ್ಬಿತು. ಬಡವರೂ, ಶ್ರೀಮಂತರೂ ಗಂಡಸರೂ, ಹೆಂಗಸರೂ, ಮಕ್ಕಳೂ, ಸೇವಕರೂ, ಶಾಲೆಯ ಹುಡುಗ ಹುಡುಗಿಯರೂ ಮತ್ತು ಎಲ್ಲ ವಿಧವಾದ ಜನರೂ ಬೇಡನ್ ಪೊವೆಲ್‌ರಿಗೆ ತಮ್ಮ ಅಭಿನಂದನೆಗಳನ್ನು ಕಳುಹಿಸಿದರು.

"ನನ್ನ ಮಗನಿಗೆ 'ಬೇಡನ್ ಪೊವೆಲ್' ಎಂದು ನಿಮ್ಮ ಹೆಸರನ್ನೇ ಇಟ್ಟಿರುವೆನು" ಎಂದು ಒಬ್ಬ ಬರೆದರೆ, "ನೀವೇ ನಿಜವಾದ ಶೂರರು. ನಿಮ್ಮನ್ನು ಪದಕಗಳಿಂದ ಅಲಂಕರಿಸಬೇಕು. ಆಸ್ಟ್ರೇಲಿಯಾ ದೇಶದ ಗೌರ್ನರ್ ಜನರಲ್ ಆಗಿ ನಿಮ್ಮನ್ನು ನೇಮಿಸಬೇಕು" ಎಂದು ಪುಟ್ಟ ಹುಡುಗನು

ಸಂತೋಷದಿಂದ ಬರೆದನು. ಇಂತಹ ಪತ್ರಗಳ ಸಂಖ್ಯೆಗೆ ಕೊನೆಮೊದಲೇ ಇರಲಿಲ್ಲ. ಇಂಗ್ಲಿಷ್ ಭಾಷೆಯಲ್ಲಿ "ಮ್ಯಾಫಿಕ್ಕಿಂಗ್ (Mafficking)" ಎಂಬ ಹೊಸ ಪದ ವೊಂದು ಸೇರಿತು—'ಅಪಾರವಾದ ಆನಂದ' ಎಂದು ಇದರ ಅರ್ಥ.

ಎಡಿನ್‌ಬರೊ ( Edinburgh) ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ದೀಪೋತ್ಸವ, ಮೆರವಣಿಗೆ ಇವುಗಳನ್ನು ಮಾಡಿ, ೨೬೦ ಪೌಂಡುಗಳನ್ನು ಚಂದಾ ಎತ್ತಿ ವಿಧವೆ ಯರ ಮತ್ತು ಅನಾಥರ ನಿಧಿಗೆ ಕೊಟ್ಟರು. ಬರ್ಮಿಂಗ್ ಹ್ಯಾಮ್‌ನಲ್ಲಿ ಮತ್ತು ಇಂಗ್ಲೆಂಡ್‌ನ ವಿವಿಧ ಸ್ಥಳಗಳಲ್ಲಿ ಸಂತೋಷ ಸೂಚನೆಯ ಕಾರ್ಯಗಳು ನಡೆದವು.

"ಇಷ್ಟು ತಿಂಗಳು ನೀವು ಮಾಡಿದ ಪ್ರಸಿದ್ಧವಾದ ರಕ್ಷಣೆಯ ಕೆಲಸದಿಂದ ಲಭಿಸಿದ ಮೇಫ್‌ಕಿಂಗ್‌ನ ಬಿಡು ಗಡೆಯ ಸಮಾಚಾರವನ್ನು ಕೇಳಿ ನಾವೂ, ನಮ್ಮ ಚಕ್ರಾಧಿಪತ್ಯದವರೆಲ್ಲರೂ ಅತ್ಯಂತ ಆನಂದದಿಂದ ಮುಳು ಗಿರುವೆವು. ಶೌರ್ಯದಿಂದಲೂ, ಭಕ್ತಿಯಿಂದಲೂ ಈ ಕೆಲಸವನ್ನು ಮಾಡಿದುದಕ್ಕಾಗಿ ನಿಮಗೂ ನಿಮ್ಮೊಡನೆ ಹೋರಾಡಿದ ಬ್ರಿಟಿಷ್ ಮತ್ತು ದೇಶೀಯ ಸಿಪಾಯಿ ಗಳಿಗೂ ಇತರರಿಗೂ ನಮ್ಮ ಮನಃಪೂರ್ತಿಯಾದ ಸಂತೋಷವನ್ನು ಸೂಚಿಸುತ್ತೇವೆ" ಎಂದು ವಿಕ್ಟೋರಿಯ ಮಹಾರಾಣಿಯವರು ಸ್ವಹಸ್ತದಿಂದಲೇ ಬೇಡನ್ ಪೊವೆಲ್‌ರಿಗೆ ಪತ್ರ ಬರೆದರು.

"ಮೇಫ್‌ಕಿಂಗ್‌ನ ಜಯದ ಕೀರ್ತಿಗೆ ಹೆಚ್ಚು ಬಾಧ್ಯ ನೆಂದರೆ ಮೇಜರ್ ಜನರಲ್ ಬೇಡನ್ ಪೊವೆಲ್. ಅವರ ಮನೋದಾರ್ಢ್ಯ, ವಿಚಕ್ಷಣೆ ಮತ್ತು ಸಮಯೋಚಿತ ವಾದ ಬುದ್ಧಿ ಇವುಗಳ ಸಹಾಯದಿಂದಲೇ ಇಂತಹ ಗಂಡಾಂತರದಿಂದ ನಾವು ಪಾರಾದೆವು. ಇವರ ಪ್ರೇರಣೆಯಿಂದ ಮೇಫ್‌ಕಿಂಗ್‌ನವರೆಲ್ಲಾ ಹುರಿದುಂಬಿ, ಹಸನ್ಮುಖಿಗಳಾಗಿ ದೃಢಚಿತ್ತದಿಂದ ಹೋರಾಡಿ ಕಷ್ಟ ಗಳನ್ನು ಲಕ್ಷಿಸದೆ ಶತ್ರುಗಳನ್ನು ಹಿಮ್ಮೆಟ್ಟಿಸಿದರು" ಎಂದು ಬೇಡನ್ ಪೊವೆಲ್‌ರ ಬಗ್ಗೆ ಲಾರ್ಡ್ ರಾಬರ್ಟ್ಸ್ ಬರೆದರು.

ಇಂಗ್ಲೆಂಡಿನಲ್ಲಿ ಇಷ್ಟು ಸಂತೋಷ ಸೂಚಕ ಕಾರ್ಯ ಗಳು ನಡೆಯುತ್ತಿದ್ದರೂ ಬೇಡನ್ ಪೊವೆಲ್‌ರಿಗೆ ಇವು ಗಳನ್ನು ತಾವೇ ನೋಡುವ ಸಮಯ ಬರಲಿಲ್ಲ. ಏಕೆಂದರೆ ದಕ್ಷಿಣ ಆಫ್ರಿಕದಲ್ಲಿಯೇ ಮತ್ತೊಂದು ಕಾರ್ಯವು ಅವರ ಪಾಲಿಗೆ ಬಿತ್ತು. ಸುತ್ತುಮುತ್ತಲಿನ ಪ್ರದೇಶವನ್ನೆಲ್ಲಾ ಬಿಡುವು ಮಾಡಿಸಿ, ಅಲ್ಲಲ್ಲಿಯೇ ಪೋಲೀಸ್ ಠಾಣ್ಯಗಳ ನ್ನಿಟ್ಟರು. ಪ್ರಿಟೋರಿಯಾದಲ್ಲಿ ಪ್ರಖ್ಯಾತರಾದ ಲಾರ್ಡ್ ರಾಬರ್ಟ್ಸ್ ಕಿಚನರ್, ಫ್ರೆಂಚ್ ಮೊದಲಾದ ಮಹಾಪುರು ಷರು ಇವರಿಗೆ ಆತಿಥ್ಯವನ್ನಿತ್ತರು. ಇಲ್ಲಿಂದ ಬೇಡನ್ ಪೊವೆಲ್‌ರಿಗೆ ಕೇಪ್‌ಟೌನ್‌ಗೆ ಹೋಗ ಬೇಕೆಂದು ರಾಬರ್ಟ್ಸ್ ಅಪ್ಪಣೆ ಮಾಡಿದರು. ಒಂಬತ್ತು ದಿನ ಹಗಲು ರಾತ್ರಿ ಪ್ರಯಾಣ. ದಾರಿಯಲ್ಲಿ ಪ್ರತಿಯೊಂದು ಸ್ಟೇಷನ್‌ನಲ್ಲಿಯೂ ಜನರು ಇವರನ್ನು ಆದರಿಸುತ್ತಾ, ಸಂತೋಷ ಪಡಿಸುತ್ತಾ ಬಹುಮಾನಗಳನ್ನು ಕೊಡುತ್ತಿ ದ್ದರು.

ಅಂತೂ ಬಹು ಸಂಭ್ರಮದಿಂದ ಕೇಪ್‌ಟೌನ್‌ಗೆ ಬಂದು ಸೇರಿದರು. ದಕ್ಷಿಣ ಆಫ್ರಿಕಾಕ್ಕೆ ಒಂದು ಹೊಸ ಮಾದರಿಯ ಪೋಲೀಸ್‌ದಳವನ್ನು ಏರ್ಪಾಡು ಮಾಡು ವುದೇ ಬೇಡನ್ ಪೊವೆಲ್‌ರ ಮನಸ್ಸಿನಲ್ಲಿ ತುಂಬಿತ್ತು. ಈ ಮಧ್ಯೆ ಬಹು ದಿನಗಳಾದರೂ ಇಂಗ್ಲೆಂಡಿಗೆ ಬಾರದಿದ್ದು ದರಿಂದ ಬೇಡನ್ ಪೊವೆಲ್‌ರ ಮನೆಯವರು ಕೇಪ್ ಟೌನ್‌ಗೆ ಬಂದರು.

೧೯೦೧ರ ಇಸವಿಯಲ್ಲಿ ಇಂಗ್ಲೆಂಡಿನ ಯುವಕರ ಸಂಸ್ಥೆಯೊಂದು ಸಂದೇಶವನ್ನು ಕಳುಹಿಸಬೇಕೆಂದು ಬೇಡನ್ ಪೊವೆಲ್‌ರನ್ನು ಪ್ರಾರ್ಥಿಸಿದಾಗ ಅವರು ಕೊಟ್ಟ ಉತ್ತರ: "ಇದನ್ನು ಎಂದಿಗೂ ನೆನಪಿನಲ್ಲಿಡಿ- ಸೈನಿಕರು ಒಂದು ಪ್ರದೇಶವನ್ನು ಸಂರಕ್ಷಣೆ ಮಾಡುವಾಗ ಸುಮ್ಮನೆ ಕೈಜೋಡಿಸಿಕೊಂಡು ಕುಳಿತು ಸಂರಕ್ಷಣೆಯ ಕೆಲಸವನ್ನು ಮಾತ್ರ ಮಾಡುವುದಿಲ್ಲ. ಶತ್ರುಗಳನ್ನು ದೂರವಾಗಿ ಆಚೆಗಟ್ಟಲು ಅವರ ಮೇಲೆ ಬಿದ್ದು ಪ್ರತಿ ಭಟಿಸುವ ಯತ್ನಗಳನ್ನೂ ಮಾಡುವರು. ಹಾಗೆಯೇ ಕೆಟ್ಟ ಅಭ್ಯಾಸಗಳಿಗೆ ತುತ್ತಾಗದಂತೆ ಜೋಕೆಯಾಗಿ ನೋಡಿಕೊಳ್ಳುವೆವೆಂದು ತೃಪ್ತರಾಗಿ ಕುಳಿತು ಕೊಳ್ಳ ಬೇಡಿ. ಪರರಿಗೆ ಉಪಕಾರವಾಗುವಂತಹ ಕಾರ್ಯಗಳನ್ನು ಯಾವಾಗಲೂ ಮಾಡುತ್ತಲೇ ಇರಬೇಕು. ಹಾಗೆ ಮಾಡಬೇಕೆಂದರೆ ಒಂದು ದೃಢ ಪ್ರತಿಜ್ಞೆಯನ್ನು ಮಾಡಿ. ಯಾರಿಗೇ ಆಗಲಿ, ದಿನಕ್ಕೊಮ್ಮೆಯಾದರೂ-ಎಷ್ಟೇ ಅಲ್ಪ ವಾದರೂ ಚಿಂತೆಯಿಲ್ಲ-ಒಂದು ಉಪಕಾರದ ಕಾರ್ಯ

ವನ್ನು ಮಾಡಿಯೇ ಮಾಡುವೆನೆಂಬುದೇ ಈ ಪ್ರತಿಜ್ಞೆ". ದಿನಕ್ಕೊಂದಾದರೂ ಪರೋಪಕಾರದ ಕೆಲಸವನ್ನು (Good turn) ಮಾಡಬೇಕೆಂಬುದು ಸ್ಕೌಟ್ ವಿಧಿಗಳಲ್ಲೊಂದು.

ಇಲ್ಲಿದ್ದಾಗಲೂ ಬೇಡನ್ ಪೊವೆಲ್‌ರಿಗೆ ಬಿಡುವೇ ಇರಲಿಲ್ಲ. ಇವರು ಮಾಡಬೇಕೆಂದಿದ್ದ ಪೋಲೀಸ್ ದಳಕ್ಕೆ ಸೇರಬೇಕೆಂದು ಬ್ರಿಟಿಷ್ ಚಕ್ರಾಧಿಪತ್ಯದ ಎಲ್ಲಾ ಭಾಗಗಳಿಂದಲೂ ಸಹಸ್ರಾರು ಅರ್ಜಿಗಳು ಬರುತ್ತಿದ್ದವು. ಇಷ್ಟರಲ್ಲಿಯೇ ಬೇಡನ್ ಪೊವೆಲ್‌ರಿಗೆ ಕಾಹಿಲೆಯಾಗಿರಲು ರಜಾ ಕೊಟ್ಟು ಅವರನ್ನು ಇಂಗ್ಲೆಂಡಿಗೆ ಕಳುಹಿಸಿದರು. ವೈದ್ಯರು ಇವರ ವಿಷಯದಲ್ಲಿ ಒಂದು ಪತ್ರದಲ್ಲಿ ಹೀಗೆ ಬರೆದಿರುವುದು 'ಆಸ್ಪತ್ರೆಯಲ್ಲಿ ಬಿದ್ದಿರುವಷ್ಟು ಉಗ್ರವಾದ ಜ್ವರವು ಬಂದಿದ್ದರೂ ಬೇಡನ್ ಪೊವೆಲ್ ಕೆಲಸವನ್ನು ಮಾಡುತ್ತಲೇ ಇರುವರು. ಬಹುಕಾಲ ಮೇಫ್‌ಕಿಂಗ್‌ನಲ್ಲಿ ಅವರು ಪಟ್ಟಶ್ರಮಕ್ಕೆ ಇನ್ನೊಬ್ಬರಾರಾದರೂ ಆಗಿದ್ದರೆ ಘೋರವಾದ ಕಾಹಿಲೆಗೆ ತುತ್ತಾಗುತ್ತಿದ್ದರು. ಒಂದು ತಿಂಗಳ ಮುಂಚೆ ಇವರಿಗೆ ಇನ್‌ಫ್ಲೂಯೆಂಜಾ ರೋಗವು ತಗುಲಿತು. ಶ್ವಾಸಕೋಶವೂ ಕೆಟ್ಟಸ್ಥಿತಿಯನ್ನು ಹೊಂದಿತು. ನಾನು ಬೆದರಿ ಒಂದು ವೈದ್ಯರ ಸಮಿತಿಯನ್ನೇರ್ಪಡಿಸಿ ಇವರಿಗೆ ಆರು ತಿಂಗಳು ರಜಾ ಕೊಡಬೇಕೆಂದು ಶಿಫಾರಸುಮಾಡಿಸಿದೆ. ಇಲ್ಲಿ ಅವರಿಗೆ ಲೇಶವೂ ಬಿಡುವಿಲ್ಲ'.

ಹೀಗೆ ಇಂಗ್ಲೆಂಡಿನಲ್ಲಿ ಕೆಲವು ಕಾಲ ವಿಶ್ರಾಂತಿಗಾಗಿ ಹೋಗಿದ್ದಾಗ ಇವರಿಗೆ ಎಡ್ವರ್ಡ್ ಚಕ್ರವರ್ತಿಯ ಭೇಟಿಯಾಯಿತು. ಆಗ ಚಕ್ರವರ್ತಿಯು ಪದಕಗಳೇ ಮೊದಲಾದ ಬಹುಮಾನಗಳನ್ನು ಕೊಟ್ಟು ಬೇಡನ್ ಪೊವೆಲ್‌ರನ್ನು ಸನ್ಮಾನಿಸಿದರು.

ಇಲ್ಲಿ ಸ್ವಲ್ಪ ಕಾಲವಿದ್ದು ಮರಳಿ ದಕ್ಷಿಣ ಆಫ್ರಿಕಾಕ್ಕೆ ಇವರು ಬಂದರು. ಬಹು ತ್ವರೆಯಿಂದ ಸ್ಥಳದಿಂದ ಸ್ಥಳಕ್ಕೆ ಮೇಲ್ವಿಚಾರಣೆಗಾಗಿ ಬೇಡನ್ ಪೊವೆಲ್ ಸಂಚಾರ ಮಾಡುತ್ತಿದ್ದರು. ಒಂದು ದಿನ ೧೧೪ ಮೈಲಿಗಳನ್ನು ಕುದುರೆಯ ಸವಾರಿಯ ಮೂಲಕ ಪ್ರಯಾಣ ಮಾಡಿದರು. ದಕ್ಷಿಣ ಆಫ್ರಿಕಾದಲ್ಲಿ ಎಲ್ಲವನ್ನೂ ಸರಿಪಡಿಸುವ ವೇಳೆಗೆ ಇಂಗ್ಲೆಂಡಿನಲ್ಲಿ ಕುದುರೆಯ ದಳದ ಮುಖ್ಯಾಧಿಕಾರಿಯ (Inspector General of Cavalry) ಕೆಲಸಕ್ಕೆ ಇವರನ್ನು ನೇಮಕ ಮಾಡಿದರು. ಇವರು ೧೯೦೩ ರಲ್ಲಿ ದಕ್ಷಿಣ ಆಫ್ರಿಕಾವನ್ನು ಬಿಟ್ಟು ಇಂಗ್ಲೆಂಡಿಗೆ ಹೋಗಿ ಸೇರಿದರು.

## ಶಾಂತಿಯ ದಂಡು

ಈ ಹೊಸ ಅಧಿಕಾರದಲ್ಲಿ ತಮ್ಮ ಸ್ವಭಾವಕ್ಕನುಗುಣವಾಗಿ ಸ್ಥಳದಿಂದ ಸ್ಥಳಕ್ಕೆ ಸಂಚಾರ ಮಾಡುತ್ತಾ, ದೇಶದ ಜನಗಳೊಡನೆ ಬೆರೆಯುವುದಕ್ಕೂ, ತಮ್ಮ ಹವಣಿಕೆಗಳನ್ನು ನೆರವೇರಿಸುವುದಕ್ಕೂ ಬೇಡನ್ ಪೊವೆಲ್‌ರಿಗೆ ಅವಕಾಶವು ದೊರಕಿದಂತಾಯಿತು. ಇತರ ದೇಶಗಳಲ್ಲಿ ಕುದುರೆಯ ಸೈನ್ಯದ ವಿಷಯವಾಗಿ ಅಭಿಪ್ರಾಯಗಳನ್ನು ಹೋಲಿಸಿ ನೋಡುವ ನೆಪದಿಂದ ಪ್ರಪಂಚದ ಎಲ್ಲಾ ಕಡೆಗಳಲ್ಲಿಯೂ ಹೋಗಲು ಅನುಕೂಲವಾಯಿತು.

ಇಂಗ್ಲೆಂಡಿಗೆ ಬಂದಮೇಲೆ ಹ್ಯಾನೋವರ್, ಆಸ್ಟ್ರಿಯ, ಕೆನಡ, ಅಮೇರಿಕ ಇಲ್ಲೆಲ್ಲಾ ಇವರು ತಿರುಗಿಕೊಂಡು ಬಂದರು. ಇವರು ಈ ಅಧಿಕಾರಕ್ಕೆ ಬಂದುದರಿಂದ ಕುದುರೆಯ ಸೈನ್ಯದಲ್ಲಿ ಕೆಲವು ಬದಲಾವಣೆಗಳಾದವು. ಸವಾರರನ್ನು ತರಬೇತು ಮಾಡುವ ಪಾಠಶಾಲೆಯೊಂದು ಆರಂಭಿಸಿದ್ದಲ್ಲದೆ, 'ಸವಾರರ ಪತ್ರಿಕೆ (Cavalry Journal)' ಪ್ರಕಟಿಸಲು ನಿರ್ಧರಿಸಿದರು.

ಸೈನ್ಯದ ಮುಖ್ಯಾಧಿಕಾರಿ ಡ್ಯೂಕ್ ಆಫ್ ಕನ್ನಾಟ್ (Duke of Cannaught) ಅವರ ಜೊತೆಯಲ್ಲಿ ೧೯೦೬ ರಲ್ಲಿ ಬೇಡನ್ ಪೊವೆಲ್ ದಕ್ಷಿಣ ಆಫ್ರಿಕಾಕ್ಕೆ ಹೋಗಿ, ಮತ್ತೊಮ್ಮೆ ಕೇಪ್‌ಟೌನ್‌ಗೆ ಬಂದುಸೇರಿ ಅಲ್ಲಿ ಟ್ರಾನ್ಸ್‌ವಾಲ್, ನೆಟಾಲ್ ಪ್ರದೇಶಗಳಲ್ಲೆಲ್ಲಾ ಮೇಲ್ವಿಚಾರಣೆ ಮಾಡಿಕೊಂಡು ಈಜಿಪ್ಟ್ ದೇಶವನ್ನು ಹಾಯ್ದು ಇಂಗ್ಲೆಂಡಿಗೆ ಹಿಂತಿರುಗಿದರು.

## ಸ್ಕೌಟ್ ಸಂಸ್ಥೆಯ ಸ್ಥಾಪನೆ

೧೯೦೭ ರಲ್ಲಿ ಸ್ಕೌಟ್ ಸಂಸ್ಥೆ (Boy Scout Movement) ಸ್ಥಾಪಿತವಾಯಿತು. ಬೇಡನ್ ಪೊವೆಲ್ ಯಾವಾಗಲೂ ಮಕ್ಕಳ ವಿಷಯದಲ್ಲಿ ಬಹಳ ಪ್ರೀತಿ, ಶ್ರದ್ಧೆ ವಹಿಸುತ್ತಿದ್ದರು. ಅವರೊಡನೆ ಆಡಬೇಕೆಂದರೆ ಅವರಿಗೆ ಬಹು ಪ್ರೀತಿ. ಈ ಕಾಲದಲ್ಲಿ "ಮೇಫ್‌ಕಿಂಗ್ ವೀರ" ಬೇಡನ್ ಪೊವೆಲ್‌ರನ್ನು ನೋಡಲು ಸಹಸ್ರಾರು

ಜನರು ಇವರು ಹೋದೆಡೆಯೆಲ್ಲಾ ಬರುತ್ತಿದ್ದರು. ಈ ಗುಂಪಿನಲ್ಲಿ ಒಬ್ಬ ವೈದ್ಯನು ಸವಾರರ ಸೈನ್ಯದ ಮುಖ್ಯಾಧಿಕಾರಿಯಂತೆ ವೇಷ ಧರಿಸಿ ಬೇಡನ್ ಪೊವೆಲ್‌ರನ್ನು ನೋಡಬೇಕೆಂದು ಕಾತುರನಾಗಿದ್ದ ಒಬ್ಬನನ್ನು ಕುರಿತು 'ನಿನ್ನನ್ನು ನೋಡಿ ಸಂತೋಷವಾಯಿತು. ಇನ್ನು ಮನೆಗೆ ಹೊರಡು' ಎಂದನು. ತನ್ನನ್ನು ನಿಜವಾಗಿಯೂ ಬೇಡನ್ ಪೊವೆಲ್‌ರೇ ಮಾತನಾಡಿಸಿದರೆಂದು ತಿಳಿದ ಆ ಮನುಷ್ಯನು ಮನೆಗೆ ಹೋದನು. ಅವನನ್ನು ಮಾತನಾಡಿಸಿದವನು ಯಾವನೋ ! ಆದುದರಿಂದಲೇ ಸ್ಕೌಟ್ ಆದವನು ಬಹು ಜಾಗ್ರತನಾಗಿ ಪರೀಕ್ಷಾ ದೃಷ್ಟಿಯಿಂದ ಎಚ್ಚರಿಕೆಯಾಗಿ ಇರಬೇಕು ಎಂಬುದು ವ್ಯಕ್ತವಾಗುತ್ತದೆ.

ಈ ಸ್ಕೌಟ್ ಸಂಸ್ಥೆಯು ಒಂದೇ ದಿನದಲ್ಲಿ ರೂಪು ಹೊಂದಲಿಲ್ಲ. ಬೇಡನ್ ಪೊವೆಲ್‌ರು ಇಂಡಿಯಾದಲ್ಲಿ ಮೊದಲು ಸೈನ್ಯದ ನಾಯಕನೆಂದಾದರೋ ಅಂದಿನಿಂದಲೂ ಸ್ವಲ್ಪ ಸ್ವಲ್ಪವಾಗಿ ಅದು ಬೆಳೆಯುತ್ತಾ ಬಂತು. ಸೈನಿಕರಿಗೆ ಸಾಧಾರಣವಾಗಿ ಕೊಡುತ್ತಿದ್ದ ಶಿಕ್ಷಣವು ಅಷ್ಟೇನೂ ಪ್ರಯೋಜನಕಾರಿಯಾದುದಲ್ಲವೆಂದು ಅರಿತು ತನ್ನ ಕೆಳಗಿನವರ ಮೇಲೆ ಈ ಸ್ಕೌಟ್ ಶಿಕ್ಷಣದಲ್ಲಿ ಪ್ರಯೋಗಗಳನ್ನು ನಡೆಸುತ್ತಿದ್ದರು. ಮೇಫ್‌ಕಿಂಗ್‌ನಲ್ಲಿ ತಮಗಾದ ಅನುಭವದಿಂದ ಬಾಲಕರಿಗೂ ಇದೇ ತರಹ ಶಿಕ್ಷಣವನ್ನು ಕೊಡುವುದು ಸಾಧ್ಯವಾಗುವುದೆಂದು ನಿರ್ಧರಿಸಿದರು.

ಸ್ಕೌಟ್ ಚಳುವಳಿಯ ತತ್ವಗಳೂ, ಪದ್ಧತಿಗಳೂ ಐವತ್ತು ವರ್ಷಗಳ ಅನುಭವದ ಫಲಿತಾಂಶ ; ಅಂದರೆ ಬೇಡನ್ ಪೊವೆಲ್ ಸಣ್ಣ ಮಗುವಾದಂದಿನಿಂದಲೂ ಸಂಗ್ರಹಿಸಿದ ಅನುಭವ. ಅವರೇ ಹೇಳಿರುವಂತೆ ಬಾಲ್ಯದಲ್ಲಿಯೇ ಅವರಿಗೆ ತನ್ನ ತಾಯಿಯಿಂದ ಎಲ್ಲವನ್ನೂ ವಿಮರ್ಶಾತ್ಮಕ ದೃಷ್ಟಿಯಿಂದ ನೋಡುವ ಶಿಕ್ಷಣವು ದೊರಕಿತು. ಅಲ್ಲಿಂದ ಸ್ಕೌಟ್ ವಿಷಯವು ಹೇಗೆ ಬೆಳೆಯಿತೆಂಬುದನ್ನು ಗುರ್ತಿಸಬಹುದು. ತಮ್ಮ ಸಹೋದರರೊಡನೆ ಬಾಲ್ಯದಲ್ಲಿ ತಮಗುಂಟಾದ ಅನುಭವಗಳೂ, ಚಾರ್ಟರ್ ಹೌಸ್ ಶಾಲೆಯ ಬಳಿಯಲ್ಲಿದ್ದ ಸಣ್ಣ ಕಾಡಿನಲ್ಲಿ ತಾನು ನಡೆಸಿದ ಸಾಹಸ ಕಾರ್ಯಗಳೂ ಇವುಗಳಿಂದ ಬಂದ ಅನುಭವಗಳಿಂದ ಅವರಿಗೆ ಸೈನ್ಯಕ್ಕೆ ಸೇರಿದಾಗ ಸಹಾಯವಾಯಿತು. ಅವರು ಸೈನ್ಯಕ್ಕೆ ಸೇರಿದಾಗ ಸ್ವಾವಲಂಬನೆ ಮತ್ತು ಸ್ವಂತವಾಗಿ ಯಾವ ಕಾರ್ಯದಲ್ಲಿಯೂ ಉಪಕ್ರಮಿಸುವುದು—ಈ ಗುಣಗಳು ಬೆಳೆಯಲು ಅವಕಾಶ ದೊರಕಿತು. ತಮ್ಮ ಅನುಯಾಯಿಗಳಲ್ಲಿ ಈ ಗುಣಗಳು ಅಭಿವೃದ್ಧಿಯಾಗುವಂತೆ ಅವರು ಬಹಳ ಪ್ರಯತ್ನ ಮಾಡುತ್ತಿದ್ದರು. ಬೇಡನ್ ಪೊವೆಲ್ ಈ ತಮ್ಮ ಆಲೋಚನೆಗಳನ್ನೆಲ್ಲಾ ಕಾರ್ಯರಂಗಕ್ಕೆ ತಂದು ಅನಂತರ ಅವುಗಳನ್ನು ಲೇಖನಗಳಲ್ಲಿಯೂ ನಕ್ಷೆ, ಚಿತ್ರಗಳಲ್ಲಿಯೂ ರಚಿಸುತ್ತಿದ್ದರು. ಅವರು ಯಾವಾಗಲೂ ಇತರರ ಅಭಿಪ್ರಾಯಕ್ಕೆ ಮರ್ಯಾದೆ ಕೊಡುತ್ತಿದ್ದರೂ ರೂಢಿಗತವಲ್ಲದ ಒಣ ನುಡಿಗಳು ಅವರಿಗೆ ಬೇಕಿರಲಿಲ್ಲ. ಅವರು ಸೈನ್ಯದಲ್ಲಿದ್ದಾಗ 'ಸ್ಕೌಟಿಂಗ್ ಕಾರ್ಯಕ್ಕೆ ಸಹಾಯಗಳು (Aids to Scouting)' ಎಂಬ ಗ್ರಂಥವನ್ನು ಮೇಫ್‌ಕಿಂಗ್ ಮುತ್ತಿಗೆಯ ಕಾಲದಲ್ಲಿ ಬರೆದರು. ಅವರು ಮುಖ್ಯವಾಗಿ ತಿಳಿಸಿರುವ ಅಂಶಗಳೆಂದರೆ—ಸ್ವತಂತ್ರವಾಗಿ ಆಲೋಚಿಸುವುದು, ಧೈರ್ಯ, ಸ್ವಾವಲಂಬನ ಈ ಗುಣಗಳು ಪ್ರತಿಯೊಬ್ಬ ಸ್ಕೌಟ್‌ನಲ್ಲಿಯೂ ಇರಬೇಕಾದುದು ಅಗತ್ಯ.

ಸ್ಕೌಟಿಂಗ್‌ನ ಮುಂದಿನ ಹಂತವೆಂದರೆ ಮೇಫ್‌ಕಿಂಗ್. ಆ ಸಣ್ಣ ಪಟ್ಟಣದಲ್ಲಿ ಬಹು ತ್ವರಿತವಾದ ಕೆಲಸಗಳಿಗಾಗಿ ನೇಮಿಸಲ್ಪಟ್ಟ ದೊಡ್ಡವರ ಸ್ಥಾನಗಳಲ್ಲಿ ಹುಡುಗರು ಜವಾಬ್ದಾರಿಯನ್ನು ವಹಿಸುವಂತೆ ಏರ್ಪಾಡು ಮಾಡಲಾಯಿತು. ಇದರಿಂದ ಸಣ್ಣ ವಯಸ್ಸಿನಲ್ಲಿಯೂ ಹುಡುಗರಿಗೆ ಜವಾಬ್ದಾರಿಯನ್ನು ಕೊಡುವುದರಿಂದ ಬಹಳ ಪ್ರಯೋಜನವಾಗುವುದೆಂಬುದು ಗೋಚರವಾಯಿತು. ಆ ಕಾಲದಲ್ಲಿಯೇ ಪ್ರಪಂಚದ ಅನೇಕ ಭಾಗಗಳಿಂದ ನೂರಾರು ಬಾಲಕರು ಕಷ್ಟ ಬಂದೊದಗಿದಾಗ ಏನು ಮಾಡಬೇಕೆಂದು ಇವರ ಬುದ್ಧಿವಾದವನ್ನು ಅಪೇಕ್ಷಿಸಿದರು. ಹೀಗೆ ೧೯೦೧ ರಲ್ಲಿ ಅವರು ಬರೆದ ಕಾಗದದಲ್ಲಿ "ನೀವು ಸ್ನೇಹಿತರಿಗಾಗಲೀ ಇತರರಿಗಾಗಲೀ ಉಪಕಾರವನ್ನು ಮಾಡಿ. ಇದೇನೂ ಕಷ್ಟವಲ್ಲ. ಪ್ರತಿದಿನವೂ ಒಂದಾದರೂ ಪರೋಪಕಾರವನ್ನು ಮಾಡುವುದನ್ನು ಅಭ್ಯಾಸ ಮಾಡುತ್ತಾ ಬಂದರೆ ಯಾವಾಗಲೂ ಉಪಕಾರ ಮಾಡುವುದು ರೂಢಿಯಾಗುವುದು" ಎಂದು ಬರೆದರು. ಇದು ಸ್ಕೌಟಿಂಗ್‌ನ ಒಂದು ಮುಖ್ಯ ಲಕ್ಷಣ.

ಆ ಮೇಲೆ ಅವರು ಇಂಗ್ಲೆಂಡಿಗೆ ಹಿಂದಿರುಗಿ ಬಂದಾಗ ತಾವು ಸೈನಿಕರಿಗೆಂದು ಮಾತ್ರ ಬರೆದಿದ್ದ ಪುಸ್ತಕದ ಸಲಹೆಗಳನ್ನು ಬಾಲಕರ ಶಿಕ್ಷಣಕ್ಕೂ ಉಪಯೋಗಿಸುತ್ತಿದ್ದ

ರೆಂದು ಕಂಡುಬಂತು. ಅನೇಕ ಶಿಕ್ಷಣ ಶಾಲೆಗಳಲ್ಲಿ ಇದನ್ನು ಆಗಲೇ ಪ್ರಯೋಗ ಮಾಡುತ್ತಿದ್ದುದನ್ನು ಇವರು ನೋಡಿದರು. ಅವಕಾಶ ಸಿಕ್ಕಿದರೆ ಒಂದು ದೊಡ್ಡ ಕಾರ್ಯವನ್ನು ಸಾಧಿಸಬಹುದೆಂದು ಮನಸ್ಸು ಮಾಡಿದರು. ಹೀಗೆ ಆಲೋಚಿಸುತ್ತಿರುವಾಗ ೧೯೦೩ ರಲ್ಲಿ ಬಾಲಕರ ದಳವೊಂದರ ವಾರ್ಷಿಕ ಪ್ರದರ್ಶನದಲ್ಲಿ ಅಗ್ರಾಸನಾಧಿಪತಿಯಾಗಲು ಇವರನ್ನು ಪ್ರಾರ್ಥಿಸಿಕೊಂಡರು. ಈ ಸಮಯದಲ್ಲಿ ತಾನು ಆಫ್ರಿಕಾದಲ್ಲಿದ್ದಾಗ ಮಾಡಿದ ಸ್ಕೌಟಿಂಗ್ ಕಾರ್ಯಗಳನ್ನು ಬಾಲಕರ ನಡತೆಯನ್ನು ಸರಿಪಡಿಸುವುದಕ್ಕೆ ಉಪಯೋಗಿಸಬಹುದೆಂದು ಹೇಳಿ, ಇಂತಹ ಸನ್ನಿವೇಶಗಳಲ್ಲೆಲ್ಲಾ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಾ ಬಾಲಕರು ಯಾವುದನ್ನೇ ಆಗಲಿ ವಿವರವಾಗಿ ನೋಡುವುದನ್ನು ಅಭಿವೃದ್ಧಿ ಮಾಡಬೇಕೆಂದರು. ಇದಕ್ಕಾಗಿ ಪರಕೀಯರ ವಿಚಾರದಲ್ಲಿ ವಿವರಗಳನ್ನೂ, ಅಂಗಡಿಯ ಕಿಟಕಿಗಳಲ್ಲಿಟ್ಟಿರುವ ಸಾಮಾನುಗಳನ್ನೂ, ಹೊಸ ರಸ್ತೆಗಳನ್ನೂ ಗುರ್ತು ಮಾಡಿಕೊಂಡು ನೆನಪಿನಲ್ಲಿಟ್ಟುಕೊಳ್ಳುವುದನ್ನು ಗುರುತು ಮಾಡಿಕೊಂಡು ನೆನಪಿನಲ್ಲಿಟ್ಟುಕೊಳ್ಳುವುದನ್ನು ರೂಢಿ ಮಾಡಿಕೊಂಡರೆ ಬಾಲಕರ ಬುದ್ಧಿ ಚುರುಕಾಗುವುದು ಮಾತ್ರವಲ್ಲದೆ, ಇತರರ ಭಾವಗಳನ್ನೂ ನಡತೆಯನ್ನೂ ಒಡನೆಯೇ ತಿಳಿದುಕೊಂಡು ಅವರ ವಿಚಾರದಲ್ಲಿ ಕನಿಕರ ಪಡುವುದಕ್ಕೆ ಸಹಾಯವಾಗುವುದೆಂದು ಸೂಚಿಸಿ, ತಮ್ಮ ಆಲೋಚನೆಗಳನ್ನೆಲ್ಲಾ ನಂತರ ಬರವಣಿಗೆಯ ಮೂಲಕ ತಿಳಿಸಿದರು.

೧೯೦೬ ರಲ್ಲಿ ಬಾಲಕರಿಗೆ ಸ್ಕೌಟ್ ಚಳುವಳಿಯ ಹಂಚಿಕೆಯೊಂದನ್ನು ಸಿದ್ಧಮಾಡಿ ಎಲ್ಲರಿಗೂ ಅದನ್ನು ಕಳುಹಿಸಿಕೊಟ್ಟರು. ಇದಕ್ಕೆ ಪ್ರೋತ್ಸಾಹಕರವಾದ ಉತ್ತರಗಳು ಬರುತ್ತಿದ್ದವು. ಇದನ್ನು ಮೆಚ್ಚಿ ಲಾರ್ಡ್ ರಾಬರ್ಟ್ಸ್ "ಈ ಅಭಿಪ್ರಾಯವು ನನಗೆ ಒಪ್ಪಿದೆ. ಬಾಲಕರಿಗೆ ಒಳ್ಳೆಯ ಗ್ರಹಣಶಕ್ತಿ ಬರುವುದು. ಸರಿಯಾದ ರೀತಿಯಲ್ಲಿ ಈ ಚಳುವಳಿಯನ್ನು ನಡೆಸಿದರೆ ಅವರು ಇದನ್ನು ಸಂತೋಷದಿಂದ ಅನುಸರಿಸುವರು. ಇದಕ್ಕೆ ಸರಿಯಾದ ಬೋಧಕರು ಬೇಕು. ದ್ರವ್ಯ ಸಹಾಯವು ಅಗತ್ಯ. ತಮಗೆ ಬಾರದಿರುವ ಆಟಗಳನ್ನು ಸುಮ್ಮನೆ ನೋಡುತ್ತಾ ನಿಂತುಕೊಂಡು, ಕಾಲವನ್ನು ಕಳೆಯುವುದಕ್ಕಿಂತ ದೊಡ್ಡ ಪಟ್ಟಣಗಳ ಸುತ್ತಮುತ್ತಲಿನ ಪ್ರದೇಶಗಳಲ್ಲೆಲ್ಲಾ ತಿರುಗುತ್ತಾ ಸ್ಕೌಟ್ ಕೆಲಸಗಳನ್ನು ಕಲಿಯುವುದರಲ್ಲಿ ಒಂದು ದಿನವನ್ನು ಕಳೆಯುವುದು ಬಹುಮಟ್ಟಿಗೆ ಉತ್ತಮ. ಆದುದರಿಂದ ಈ ಏರ್ಪಾಡನ್ನು ಸರಿಯಾಗಿ ನಡೆಸಬೇಕೆಂದು ನನಗೆ ಆಸೆ" ಎಂದು ಹೇಳಿರುವರು.

೧೯೦೭ ರಲ್ಲಿ ದೊಡ್ಡ ದೊಡ್ಡ ಸ್ಥಳಗಳಲ್ಲಿ ಬೇಡನ್ ಪೊವೆಲ್ ಸ್ಕೌಟಿಂಗ್ ವಿಚಾರದಲ್ಲಿ ಉಪನ್ಯಾಸಗಳನ್ನು ಕೊಟ್ಟರು. ಇದೇ ಸ್ಕೌಟ್ ದಳಗಳ ಏರ್ಪಾಡಿನ ಮೊದಲನೆಯ ಪ್ರಯತ್ನವೆನ್ನಬಹುದು. ಡಾರ್ಸೆಟ್ಟಿನ ಬ್ರೌನ್‌ಸೀ ದ್ವೀಪದಲ್ಲಿ ಪರೀಕ್ಷಾರ್ಥವಾಗಿ ಸ್ಕೌಟ್ ಕೇಂದ್ರವೊಂದನ್ನು ಸ್ಥಾಪಿಸಿದರು. ಇಲ್ಲಿ ಸ್ಕೌಟ್ ಕಟ್ಟಳೆಯ ಪ್ರಕಾರ ಹುಡುಗರ ಕೈಯಿಂದಲೇ ಕೆಲಸ ಮಾಡಿಸಿದರು. ಹುಡುಗರು ತಮ್ಮೊಳಗೇ ಒಬ್ಬನನ್ನು ಮುಖಂಡನನ್ನಾಗಿ ಮಾಡಿಕೊಂಡು ಆತನ ಕೈಕೆಳಗೆ ಕೆಲಸ ಮಾಡುವುದನ್ನು ಪ್ರಯೋಗ ಮಾಡಿ ನೋಡಿದರು. ಈ ಪ್ರಯೋಗವು (Patrol System) ಬೇಡನ್ ಪೊವೆಲ್‌ರ ನಿರೀಕ್ಷಣೆಗೂ ಮೀರಿದಷ್ಟು ಜಯಪ್ರದವಾಯಿತು.

೧೯೦೮ ರಲ್ಲಿ ಪಕ್ಷಕ್ಕೊಮ್ಮೆ ಪಕ್ಷಕ್ಕೊಮ್ಮೆ ಪ್ರಕಟವಾಗಿ ಆರು ಸಂಚಿಕೆಗಳಲ್ಲಿ "ಬಾಲಕರಿಗೆ ಸ್ಕೌಟ್ ಕೆಲಸ (Scouting for Boys)" ಎಂಬ ಪತ್ರಿಕೆಯು ಪ್ರಕಟವಾಯಿತು. ಇದರ ಮೊದಲಿಗೇ ದೇಶದಲ್ಲೆಲ್ಲಾ ಸ್ಕೌಟ್ ದಳಗಳು ಹುಟ್ಟಿದವು—ಇಂಗ್ಲೆಂಡಿನಲ್ಲಿ ಮಾತ್ರವೇ ಅಲ್ಲ, ಎಲ್ಲೆಲ್ಲಿಯೂ ಈ ಚಳುವಳಿ ಹಬ್ಬಿ, ಪ್ರಪಂಚದ ಹಲವು ಭಾಗಗಳಲ್ಲೆಲ್ಲಾ ದಳಗಳು ಆರಂಭವಾದವು ಇವರೆಲ್ಲರ ತಿಳುವಳಿಕೆಗಾಗಿ "ದಿ ಸ್ಕೌಟ್ (The Scout)" ಎಂಬ ಪತ್ರಿಕೆಯನ್ನು ಬೇಡನ್ ಪೊವೆಲ್ ಹೊರಡಿಸಿದರು.

ಇವರು ಯುದ್ಧ ಮಾಡುವ ಕಾಲಗಳಲ್ಲಿ ಷರ್ಟು, ಶಲ್ಯ, ನಿಕ್ಕರ್ ಇವುಗಳನ್ನು ಹಾಕಿಕೊಳ್ಳುತ್ತಿದ್ದರು. ಇದೇ ಸ್ಕೌಟ್‌ಗಳಿಗೆ ಗೊತ್ತಾದ ಏಕ ರೀತಿಯ ಪೋಷಾಕು (Scouting Uniform) ಆಯಿತು. ಆಗ ಬೇಡನ್ ಪೊವೆಲ್ ಇನ್ನೂ ಸೈನ್ಯದಲ್ಲಿ ಕೆಲಸದಲ್ಲಿದ್ದುದರಿಂದ ಬಿಡುವು ಕಾಲಗಳಲ್ಲಿ ಮಾತ್ರ ಬಾಲಕರಿಗೋಸ್ಕರ ಬೇಕಾದ ಕಾರ್ಯಗಳನ್ನು ತಾವು ಮಾಡುತ್ತಿದ್ದರು.

೧೯೦೯ ರಲ್ಲಿ 'ಕ್ರಿಸ್ಟಲ್ ಪ್ಯಾಲೆಸ್ (Crystal Palace)' ಎಂಬಲ್ಲಿ ಸ್ಕೌಟ್‌ಗಳ ದೊಡ್ಡ ಕೂಟವೊಂದು ಏರ್ಪಾಡಾಯಿತು. ಹನ್ನೊಂದು ಸಾವಿರ ಬಾಲಕರು

ನೆರೆದಿದ್ದರು. ಗ್ಲಾಸ್ಗೋನಲ್ಲಿ ಆರು ಸಾವಿರ ಬಾಲಕರು ಸೇರಿದ್ದರು. ಸ್ಕೌಟಿಂಗ್ ಆಟಗಳನ್ನು ಕುರಿತು ಬೇಡನ್ ಪೊವೆಲ್ ಈ ವರ್ಷ ಒಂದು ಪುಸ್ತಕವನ್ನು ಪ್ರಕಟಿಸಿದರು. ಇದೇ ವರ್ಷ ಏಳನೆಯ ಎಡ್ವರ್ಡ್ ದೊರೆಯು ಬೇಡನ್ ಪೊವೆಲ್‌ರಿಗೆ ಕೆ. ಸಿ. ವಿ. ಒ. (Knight Commander of the Royal Victoria Order) ಎಂಬ ಬಿರುದನ್ನು ದಯಪಾಲಿಸಿ ಸ್ಕೌಟ್ ಸಂಸ್ಥೆಯನ್ನು ಬಹಳವಾಗಿ ಹೊಗಳಿದರು. ಅನಂತರ ಬೇಡನ್ ಪೊವೆಲ್‌ರು ರಾಜರೆದುರಿಗೆ ಸ್ಕೌಟ್ ವಿಷಯಗಳನ್ನೆಲ್ಲಾ ವಿವರಿಸಿದರು. ಸ್ಕೌಟ್‌ಗಳಲ್ಲಿ ಕೇವಲ ಪ್ರೌಢಿಮೆಯುಳ್ಳವರು 'ರಾಜರ ಸ್ಕೌಟ್‌ಗಳು (King's Scouts)' ಎಂದು ಕರೆಯಲ್ಪಡಲು ದೊರೆಯು ಆಣತಿಯನ್ನಿತ್ತರು, ಸ್ಕೌಟ್ ಸಂಸ್ಥೆಯು ಜಯಪ್ರದವಾಗಿ ನಡೆಯಬಲ್ಲದೆಂದು ಎಡ್ವರ್ಡ್ ರಾಜರಿಗೆ ದೃಢವಾದ ನಂಬಿಕೆ. ನಂತರ ಬಂದ ರಾಜರೂ ಸ್ಕೌಟ್ ಸಂಸ್ಥೆಗೆ ಉತ್ತೇಜನ ನೀಡಿದರು.

ಈ ಚಳುವಳಿಗೆ ಹಲವರು ಸದಸ್ಯರಾಗಿ ಅನೇಕ ಬಗೆಯಲ್ಲಿ ಸಹಾಯ ಮಾಡುತ್ತ ಅಭಿವೃದ್ಧಿಗೆ ತಂದರು. ಮೊದಲು ಈ ಸಂಸ್ಥೆ ಕೆಲವರ ಸಂಪೂರ್ಣ ವಿಶ್ವಾಸಕ್ಕೆ ಪಾತ್ರವಾಗಿರಲಿಲ್ಲ. ಅವರಿಗೆ ಅದರ ಉಪಯೋಗವು ಹೆಚ್ಚು ಪರಿಚಯವಾದಮೇಲೆ ಅವರೇ ಪ್ರೋತ್ಸಾಹಿಸತೊಡಗಿದರು. ಇದಕ್ಕೊಂದು ದೃಷ್ಟಾಂತ: ಒಬ್ಬನ ತೋಟದಿಂದ ದಿನವೂ ಯಾರೋ ಹಣ್ಣುಗಳನ್ನು ಕದಿಯುತ್ತಿದ್ದರು. ಸ್ಕೌಟ್‌ಗಳೇ ಈ ಕೆಲಸವನ್ನು ಮಾಡುತ್ತಿರುವರೆಂದು ತೋಟಗಾರನಿಗೆ ಸಂದೇಹ. ಅವರು ಸಿಕ್ಕಿದರೆ ಬಲವಾಗಿ ಪೆಟ್ಟು ಹೊಡೆಯಬೇಕೆಂದು ಅವನು ಮನಸ್ಸು ಮಾಡಿದನು. ಯಾರೂ ಸಿಕ್ಕಲಿಲ್ಲ. ಕಡೆಗೆ ಇನ್ನೇನೂ ಉಪಾಯ ತೋರದೆ ಮುಳ್ಳುತಂತಿಗಳನ್ನು ಸುತ್ತಲೂ ಬೇಲಿಯಾಗಿ ಬಿಗಿದನು. ಅಂದಿನಿಂದ ಹಣ್ಣುಗಳ ಕಳವು ನಿಂತಿತು. ಕೆಲವು ದಿನಗಳ ಮೇಲೆ ಬೇಸಿಗೆಯಲ್ಲಿ ಅವನ ತೋಟದಲ್ಲಿ ಬೆಳೆದಿದ್ದ ಹುಲ್ಲಿಗೆ ಬೆಂಕಿ ಬಿತ್ತು. ತೋಟದ ಹಣ್ಣಿನ ಗಿಡಗಳೆಲ್ಲ ಸುಟ್ಟು ಹೋಗುವಂತಿತ್ತು. ಆಗ ಸ್ಕೌಟ್ ಹುಡುಗರು ಒಡನೆಯೇ ತಾವು ಸಂಚಾರಕ್ಕೊಯ್ಯುವ ಕಂಬಳಿಗಳನ್ನು ತಂತಿಯ ಮೇಲೆ ಹಾಕಿ, ಅದರ ಮೇಲೆ ಬೇಲಿಯನ್ನು ಹಾಯ್ದು ತೋಟದೊಳಗೆ ನುಗ್ಗಿ, ಉಳಿದ ಕಂಬಳಿಗಳ ಸಹಾಯದಿಂದ ಬಹು ತೀವ್ರವಾಗಿ ಬೆಂಕಿಯನ್ನಾರಿಸಿದರು. ಆಗ ಕಳ್ಳತನವನ್ನು ಮಾಡುತ್ತಿದ್ದವರು ಸ್ಕೌಟ್ ಹುಡುಗರಲ್ಲವೆಂದು ತೋಟಗಾರನಿಗೆ ಮಂದಟ್ಟಾಯಿತು. ಇಂಥ ನೀಚ ಕಾರ್ಯಕ್ಕೆ ಸ್ಕೌಟ್‌ಗಳು ತೊಡಗರೆಂದು ಅವನಿಗೆ ಚೆನ್ನಾಗಿ ಗೊತ್ತಾಯಿತು. ನಂತರ ಅವನು ಸ್ಕೌಟ್ ಸಂಸ್ಥೆಗೆ ಅನುಕೂಲಗಳನ್ನು ಒದಗಿಸಿದನು.

ತನ್ನ ಇಚ್ಛೆಯ ಪ್ರಕಾರ ಈ ಸಂಸ್ಥೆಯು ಬೆಳೆದಲ್ಲಿ ತನಗೆ ಹಗಲೂ ರಾತ್ರಿ ಎಡೆಬಿಡದೆ ಮಾಡುವಷ್ಟು ಕೆಲಸದ ಹೊರೆಯು ಬಂದು ಬೀಳುವುದೆಂದು ಬೇಡನ್ ಪೊವೆಲ್ ತಿಳಿದುಕೊಂಡಿದ್ದರು. ಆದರೂ ಮುಂದೆ ಯುದ್ಧಕ್ಕೋಸ್ಕರವೇ ಕೆಲವು ಜನರನ್ನು ತಯಾರುಮಾಡುವುದಕ್ಕಿಂತ ಮುಂದಿನ ಜನಾಂಗವಾದ ಇಂದಿನ ಬಾಲಕರಿಗೆ ಸರಿಯಾದ ಶಿಕ್ಷಣ ಕೊಟ್ಟರೆ ದೇಶಕ್ಕೆ ಹೆಚ್ಚು ಸೇವೆಯನ್ನು ಮಾಡಿದಂತಾಗುವುದೆಂದು ಅವರಿಗೆ ಪೂರ್ಣವಾದ ನಂಬಿಕೆಯಿತ್ತು. ಹೀಗೆಯೇ ಮಾಡಬೇಕೆಂದು ತನ್ನ ೩೦ ವರ್ಷ ಸೈನ್ಯದಲ್ಲಿನ ಉದ್ಯೋಗದಿಂದ ವಿಶ್ರಾಂತಿ ಹೊಂದಿದರು. ಸ್ಕೌಟ್‌ಗಳಿಗೆ ತಮ್ಮ ವ್ಯಕ್ತಿತ್ವದ ತಿಳಿವಳಿಕೆಯನ್ನು ಕೊಟ್ಟು ಸಮಾಜದ ಸೇವೆಗೆ ಅದನ್ನು ಉಪಯೋಗಿಸಬೇಕೆಂಬುದೇ ಬೇಡನ್ ಪೊವೆಲ್‌ರ ಮುಖ್ಯವಾದ ಗುರಿ. (Train your Scouts as individuals and then harness that individuality for the good of the whole—B. P.) ಬೇಡನ್ ಪೊವೆಲ್ ತಾನು ಸ್ವತಃ ಆಚರಣೆಗೆ ತಾರದಿರುವ ಒಂದು ವಿಷಯವನ್ನು ಬೋಧಿಸಿದನು. ತಾನು ಸೈನ್ಯದ ಮಧ್ಯೆಯೇ ಇದ್ದು ಪಡೆದಿದ್ದ ಅನುಭವದಿಂದ ಯುವಕರ ಮುಖಂಡನಾಗಿರಲು ಯೋಗ್ಯತೆಯನ್ನು ಸಂಪಾದಿಸಿದ್ದರು. ಯುದ್ಧದ ಘೋರ ಕೃತ್ಯಗಳನ್ನೂ, ಪರಿಣಾಮಗಳನ್ನೂ ಪ್ರತ್ಯಕ್ಷವಾಗಿ ನೋಡಿ ಜಿಗುಪ್ಸೆ ಹೊಂದಿದ್ದುದರಿಂದ ಪ್ರಪಂಚದಲ್ಲಿ ಶಾಂತಿ ನೆಲೆಗೊಳ್ಳುವಂತೆ ಮಾಡಬೇಕೆಂಬ ಅಭಿಲಾಷೆ ಅವರಲ್ಲಿ ಚೆನ್ನಾಗಿ ಬೇರೂರಿತು.

ಈ ಸ್ಕೌಟ್ ಸಂಸ್ಥೆಯ ಸಂಸ್ಥಾಪಕ ಬೇಡನ್ ಪೊವೆಲ್ ಸೈನ್ಯಾಧಿಪತಿಯಾಗಿದ್ದವರು. ಈ ಸಂಸ್ಥೆಯು ಕೇವಲ

ಹೋರಾಟಕ್ಕೆ ಸಂಬಂಧಿಸಿರುವುದೆಂದು ಕೆಲವರ ಆಕ್ಷೇಪಣೆ. ಇದಕ್ಕೆ 'ಒಂದು ಹಳೆಯ ಸರ್ಕಸ್ ಕುದುರೆಯು ಸ್ವಲ್ಪ ಕಾಲ, ತನ್ನ ಸಾಹಸ, ಆಟಪಾಟಗಳು ಇವುಗಳನ್ನು ತೋರಿಸಿದುದೆಲ್ಲ ಆದಮೇಲೆ ಕಡೆಗೆ ಗಾಡಿಯನ್ನೆಳೆಯುವ ಕೆಲಸಕ್ಕೆ ನಿಲ್ಲುವುದರಲ್ಲೇನು ಅಡ್ಡಿಯಿರುವುದು ?' ಎಂಬ ಸಮಾಧಾನದ ಉತ್ತರವನ್ನು ಬೇಡನ್ ಪೊವೆಲ್‌ರೇ ಹೇಳಿರುವರು.

ರಾಜಕೀಯ ಪಂಗಡಗಳ ರೀತಿ-ನೀತಿಗಳಲ್ಲಿ ಅವರಿಗೆ ಲೇಶವೂ ಅಭಿರುಚಿಯಿರಲಿಲ್ಲ. ಆತ್ಮಸಾಕ್ಷಿಗೆ ವಿರೋಧ ವಾಗಿ ದೇಶದ ಹಿತವನ್ನು ಲಕ್ಷಿಸದೆ ನಡೆಸಬೇಕಾದ ರೀತಿ-ನೀತಿಗಳು ಅವರ ಸ್ವಭಾವಕ್ಕೆ ಹಿತವಾಗವು. ದಕ್ಷಿಣ ಆಫ್ರಿಕದಿಂದ ಹಿಂತಿರುಗಿದ ಮೇಲೆ ಪಾರ್ಲಿಮೆಂಟಿಗೆ ಸ್ಪರ್ಧಿಸೆಂದು ಇವರನ್ನು ಕೆಲವರು ಕೇಳಿಕೊಂಡರು. ಅದಕ್ಕೆ ಇವರು ಒಪ್ಪಲಿಲ್ಲ.

ಬೇಡನ್ ಪೊವೆಲ್ ಕೆಲವು ಸ್ಕೌಟ್‌ಗಳೊಡನೆ ಕೆನಡ ದೇಶಕ್ಕೆ ಹೋಗಿ ಅಲ್ಲಿ ಸಂಚಾರ ಮಾಡುತ್ತ ಮುಂದೆ ಹೋಗಿ ದಾರಿಯನ್ನು ಸರಿಮಾಡುವುದು, ಜಾಡನ್ನು ಪತ್ತೆ ಮಾಡುವುದು, ಹೊರಗೆ ಸಂಚಾರ ಹೊರಟಾಗ ಪಾಳೆಯ ಬಿಡುವುದು (Camping), ಅಡಿಗೆ ಮಾಡು ವುದು ಇವುಗಳ ವಿಷಯದಲ್ಲಿ ಬೋಧನೆ ಮಾಡಿದುದಲ್ಲದೆ ಎಲ್ಲವನ್ನೂ ತಾವೇ ಪ್ರತ್ಯಕ್ಷವಾಗಿ ಮಾಡಿ ತೋರಿಸಿದರು. ಅಮೆರಿಕದವರು ಮೊದಲು ಸ್ಕೌಟ್ ಸಂಸ್ಥೆಯನ್ನು ಕಂಡರೆ ನಗುತ್ತಿದ್ದರು. ಹೀಗಿರಲು ಅಮೆರಿಕಾ ದೇಶ ದಲ್ಲಿ ಚಿಕಾಗೊ ಪಟ್ಟಣದ ಜೆ. ಡಿ. ಬಾಯ್ಸ್ (J. D. Boyce) ಎಂಬ ಶ್ರೀಮಂತರು ಲಂಡನ್‌ನಲ್ಲಿ ಹೋಗುತ್ತಿದ್ದಾಗ ಒಬ್ಬ ಹುಡುಗನು ಅವರ ಬಳಿಗೆ ಬಂದು ಅವರಿಂದ ಪೆಟ್ಟಿಗೆಗಳನ್ನು ತೆಗೆದುಕೊಂಡು ಹೊತ್ತು ತಂದನು. ಶ್ರೀಮಂತರು ಅವರಿಗೆ ಕೂಲಿ ಕೊಡುವುದಕ್ಕೆ ಹೋದಾಗ, ಆ ಹುಡುಗನು ತೆಗೆದುಕೊಳ್ಳಲಿಲ್ಲ. ಶ್ರೀಮಂತರಿಗೆ ಆಶ್ಚರ್ಯವಾಯಿತು. ಅದಕ್ಕೆ ಆ ಹುಡು ಗನು ತಾನು ಸ್ಕೌಟೆಂದೂ, ಆದಕಾರಣ ತೆಗೆದುಕೊಳ್ಳು ವುದಿಲ್ಲವೆಂದೂ ತಿಳಿಸಿದನು. ಶ್ರೀಮಂತರಿಗೆ ಆಲೋಚನೆಗೆ ಕಾರಣವಾಯಿತು. ಹುಡುಗನೋ ಬಡವ. ತಾವು ಹೆಚ್ಚಾಗಿಯೇ ಹಣ ಕೊಡಲಿದ್ದರು. ಆದರೂ ಹುಡುಗನು ಅದನ್ನು ತೆಗೆದುಕೊಳ್ಳದಿರಬೇಕಾದರೆ ಈ ಸಂಸ್ಥೆಯಲ್ಲಿ ಏನೋ ದೊಡ್ಡ ಸತ್ವವಿರಬೇಕೆಂದು ನಿಶ್ಚಯಿಸಿದರು. ಒಡನೆಯೇ ಬೇಡನ್ ಪೊವೆಲ್‌ರು ಬರೆದಿದ್ದ "ಬಾಲಕರಿಗೆ ಸ್ಕೌಟ್ ಕೆಲಸ (Scouting for Boys)" ಎಂಬ ಪುಸ್ತಕವನ್ನು ಕೊಂಡು ಅಮೇರಿಕಾದಲ್ಲಿಯೂ ಸ್ಕೌಟ್ ಸಂಸ್ಥೆಯನ್ನು ಆರಂಭಿಸಬೇಕೆಂದು ನಿರ್ಧರಿಸಿ ಹಿಂತಿರುಗಿ ದರು. ಅಮೇರಿಕದ ಅಧ್ಯಕ್ಷ ರೂಸ್‌ವೆಲ್ಟ್ (Roosevelt) ಅವರು ಈ ಪುಸ್ತಕವನ್ನು ಬಹುವಾಗಿ ಹೊಗಳಿ "ಸಾಮಾನ್ಯವಾದ ಆಟಗಳಿಂದಾಗುವುದಕ್ಕಿಂತ ನಿಮ್ಮ ಪುಸ್ತಕದಲ್ಲಿ ಬೋಧಿಸಿರುವಂತೆ ಬಯಲಿನಲ್ಲಿ ಕಾಲ ಕಳೆಯುವುದರಿಂದಾಗುವ ಪ್ರಯೋಜನವು ಅಧಿಕವಾ ದುದು" ಎಂದು ಬೇಡನ್ ಪೊವೆಲ್‌ರಿಗೆ ಬರೆದರು. ಒಂದು ವರ್ಷವಾದಮೇಲೆ "ಕೆನಡಾ ದೇಶದ ಹುಡುಗರಿಗೆ ಹೊಸ ಮನೋಗತಗಳನ್ನೂ ಒಂದು ಹೊಸ ಮತವನ್ನೂ ಈ ಸಂಸ್ಥೆಯು ತಂದುಕೊಟ್ಟಿದೆ" ಎಂದು ಅಲ್ಲಿಯ ಗೌರ್ನರ್ ಜನರಲ್ ಲಾರ್ಡ್ ಗ್ರೇ (Lord Grey) ಬರೆದರು. ಡ್ಯೂಕ್ ಆಫ್ ಕನ್ನಾಟ್‌ರಿಗೆ ಬೇಡನ್ ಪೊವೆಲ್‌ರನ್ನೂ ಅವರ ಏರ್ಪಾಡುಗಳನ್ನೂ ಕಂಡರೆ ಬಹಳ ಸಂತೋಷ. ಅವರು ೧೯೦೯ ರಲ್ಲಿ ಸ್ಥಾಪಿತವಾದ ಈ ಚಳುವಳಿಯ ಆಡಳಿತದ ಸಮಿತಿಗೆ ಅಧ್ಯಕ್ಷರಾದರು. "ಈ ಸಂಸ್ಥೆಯಿಂದ ನಮ್ಮ ಬಾಲಕರ ಮೇಲೆ ಬಹು ಒಳ್ಳೆಯ ಪರಿಣಾಮ ವಾಗುವುದು. ಇದು ಅವರು ಪೌರುಷವನ್ನೂ ಇತರ ಒಳ್ಳೆಯ ಗುಣಗಳನ್ನೂ ಪುಷ್ಟೀಕರಿಸುವುದು. ಎಲ್ಲ ಕ್ಕಿಂತಲೂ ಮಿಗಿಲಾಗಿ ತಮ್ಮಷ್ಟಕ್ಕೆ ತಾವೇ ಕೆಲಸಗಳನ್ನು ಮಾಡುವುದನ್ನು ಕಲಿಸಿಕೊಡುತ್ತದೆ. ಸ್ವಸಹಾಯವನ್ನು ಇದರಿಂದ ಚೆನ್ನಾಗಿ ಕಲಿಯಬಹುದು" ಎಂದು ಅವರು ಹೇಳಿರುತ್ತಾರೆ. ೧೯೧೧ ರಲ್ಲಿ ಐದನೆಯ ಜಾರ್ಜ್ ಚಕ್ರವರ್ತಿಯು ಮೂವತ್ತುಮೂರು ಸಾವಿರ ಸ್ಕೌಟ್ ಗಳು ಒಟ್ಟಿಗೆ ನೆರೆದಿದ್ದುದನ್ನು ಪರೀಕ್ಷಿಸಿದರು.

## ವಿವಾಹ - ಸಂದೇಶ

ಎರಡು ವರ್ಷಗಳ ಕಾಲ ಬೇಡನ್ ಪೊವೆಲ್ ನಾರ್ವೆ ಮತ್ತು ಸ್ವೀಡನ್, ಪನಾಮ, ವೆಸ್ಟಿಂಡಿಯಾ ದ್ವೀಪಗಳು, ಅಮೆರಿಕದ ಸಂಯುಕ್ತ ಸಂಸ್ಥಾನಗಳು, ಕೆನಡಾ, ಜಪಾನ್, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ, ನ್ಯೂಸಿಲ್ಯಾಂಡ್ ಇವೇ ಮೊದಲಾದ ಹಲವು ದೇಶಗಳಿಗೆಲ್ಲಾ ಹೋಗಿ ಸ್ಕೌಟ್‌ಗಳನ್ನು ವಿಚಾರಣೆ ಮಾಡಿಕೊಂಡು ಬಂದರು.

ಇವರು ೧೯೧೩ ರಲ್ಲಿ ಒಲೀವ್ ಸೋಮ್ಸ್ (Olave Soames) ಎಂಬುವರನ್ನು ಲಗ್ನವಾದರು. ಇವರು ತಮ್ಮ ಪತಿಯ ಈ ಮಹತ್ತಾದ ಕಾರ್ಯದಲ್ಲಿ ಬಹು ನೆರವಾದರು. ಇವರನ್ನು ಮದುವೆ ಮಾಡಿಕೊಂಡಾಗ ಅಲ್ಲಿಂದೀಚೆಗೆ ಸ್ಕೌಟ್ ಚಳುವಳಿಯ ವಿಷಯದಲ್ಲಿ ಬೇಡನ್ ಪೊವೆಲ್ ಮುಂಚಿನಷ್ಟು ಶ್ರದ್ಧೆಯನ್ನು ವಹಿಸನೆಂದೂ, ಅವರ ಪತ್ನಿಯು ಇದರ ಅಭಿವೃದ್ಧಿ ಕಾರ್ಯದಲ್ಲಿ ಅವರಿಗೆ ಅಡ್ಡಿ ಬರುವರೆಂದೂ ಎಲ್ಲರೂ ಊಹಿಸಿದ್ದರು. ಹಾಗೆಂದಿಗೂ ಆಗಲಿಲ್ಲ. ಅವರು ಅವರ ನಿಜವಾದ ಅನುಚರರಾಗಿ ಅವರ ಸ್ಕೌಟ್ ಚಳುವಳಿಯ ಅಭಿವೃದ್ಧಿಯ ಕಾರ್ಯದಲ್ಲಿ ಹಲವು ವಿಧಗಳಲ್ಲಿ ಸಹಾಯ ಮಾಡಿದರು.

ಬಾಲಕಿಯರಿಗಾಗಿ ಗರ್ಲ್ ಗೈಡ್ಸ್ (Girl Guides), ಪುಟ್ಟ ಹುಡುಗರಿಗಾಗಿ ಉಲ್ಫ್ ಕಬ್ಸ್ (Wolf Cubs), ಸಮುದ್ರದ ಕಡೆ ಮನಸ್ಸಿರುವ ಹುಡುಗರಿಗಾಗಿ ಸೀ ಸ್ಕೌಟ್ಸ್ (Sea Scouts) ಎಂಬ ಸಂಸ್ಥೆಗಳು, ಸ್ಕೌಟ್ ಮಾಸ್ಟರುಗಳನ್ನು ತಯಾರು ಮಾಡುವ ಬೀಡುಗಳು, ಬಾಲಕರಿಗೆ ರುಚಿಸುವ ಪ್ರತಿಯೊಂದು ವಿಷಯದಲ್ಲಿಯೂ ಪಾಂಡಿತ್ಯದ ಗುರ್ತಿಗಾಗಿ ಬಿಲ್ಲೆಗಳು—ಇವುಗಳನ್ನೆಲ್ಲಾ ಏರ್ಪಡಿಸಬೇಕೆಂಬ ಅಗತ್ಯವು ಬೇಡನ್ ಪೊವೆಲ್‌ರಿಗೆ ಆಗಾಗ ತೋರುತ್ತಿತ್ತು. ಇಷ್ಟೆಲ್ಲಾ ಮಾಡುವುದರಲ್ಲಿ ಅವರ ಪತ್ನಿಯು ಬಹಳ ನೆರವಾದರು. ಅವರೇ ಚೀಫ್ ಗೈಡ್ ಎಂಬ ಸ್ಥಾನವನ್ನು ವಹಿಸಿ ಬಾಲಕಿಯರಿಗೆ ಈ ಚಳುವಳಿಯ ವಿಷಯದಲ್ಲಿ ಸರಿಯಾದ ಬೋಧಕರಾದರು.

೧೯೧೩ ರಲ್ಲಿ ಬರ್ಮಿಂಗ್‌ಹ್ಯಾಂನಲ್ಲಿ ಸ್ಕೌಟ್ ಕೂಟ (Rally) ಒಂದಾಯಿತು. ಅಲ್ಲಿ ನಡೆದ ಪ್ರದರ್ಶನದ ಸ್ಥಳದಲ್ಲಿ ಒಬ್ಬ ಸ್ಕೌಟ್ ಬಾಲಕನಿಗೆ ಒಂದು ಹಣದ ಚೀಲ ಸಿಕ್ಕಿತು. ಅದರೊಳಗೆ ಹದಿನೈದು ಪೌನುಗಳಿದ್ದವು. ಒಳಗಿದ್ದ ಒಂದು ಕಾಗದದ ಸಹಾಯದಿಂದ ಆ ಚೀಲವು ಒಬ್ಬ ಸ್ತ್ರೀಯದೆಂಬ ವಿಷಯವೂ, ಆಕೆಯ ಮನೆಯಿದ್ದ ಸ್ಥಳವೂ ಆ ಬಾಲಕನಿಗೆ ತಿಳಿಯಿತು. ಒಡನೆಯೇ ಅವನು ಆಕೆಯ ಮನೆಯ ಕಡೆಗೆ ಓಡಿದನು. ಅಲ್ಲಿ ಆ ಸ್ತ್ರೀಗೆ ಹಣದ ಚೀಲ ಕಂಡು ಆನಂದವಾಯಿತು. ಆ ಬಾಲಕನಿಗೆ ಬಹುಮಾನವಾಗಿ ಕೆಲವು ನಾಣ್ಯಗಳನ್ನು ಕೊಟ್ಟಳು. "ನನಗೆ ಬೇಡ; ನಾನು ಸ್ಕೌಟ್ ಬಾಲಕನು" ಎಂದು ಹುಡುಗನು ಹೇಳಿದನು. ಕೊಟ್ಟ ಬಹುಮಾನವು ಸಾಲದೆಂದು ಅತೃಪ್ತನಾಗಿ ಈ ರೀತಿ ಹೇಳುವನೆಂದು ಆ ಹೆಂಗಸು ಸಿಟ್ಟಿನಿಂದ ಮತ್ತಷ್ಟು ನಾಣ್ಯಗಳನ್ನು ಕೊಟ್ಟಳು. ಆಗ ಬಾಲಕನು "ಇದು ಪ್ರತಿದಿನ ನಾವು ಮಾಡಬೇಕಾದ ಕರ್ತವ್ಯಗಳಲ್ಲಿ ಒಂದು" ಎಂದು ಹೇಳಿ ಹೊರಟು ಹೋದನು.

೧೯೧೪ ರಲ್ಲಿ ಬೇಡನ್ ಪೊವೆಲ್‌ರ ತಾಯಿಯು ಮರಣ ಹೊಂದಿದರು. ಈ ಸಮಯದಲ್ಲಿ ಬೇಡನ್ ಪೊವೆಲ್ ಬಹು ಉತ್ಕೃಷ್ಟವಾದ ಸಂದೇಶವನ್ನು ನೀಡಿದ್ದಾರೆ. "ಒಳ್ಳೆಯ ತಾಯಿಯನ್ನು ಪಡೆದಿರುವುದು ಎಂತಹ ಪುಣ್ಯವೆಂಬುದು ಅನೇಕ ಜನ ಸ್ಕೌಟ್‌ಗಳಿಗೆ ಗೊತ್ತಿದೆ. ನಿಮ್ಮ ತಾಯಿಯು ನಿಮಗೋಸ್ಕರ ಬಹಳ ಕಷ್ಟಪಟ್ಟಿರುವಳು. ಮಕ್ಕಳಾಗಿದ್ದಾಗ ಆರೋಗ್ಯವಾಗಿದ್ದಾಗಲೂ ಕಾಹಿಲೆಯ ಸ್ಥಿತಿಯಲ್ಲಿಯೂ ಸಾಕಲು ಆಕೆಯು ಎಷ್ಟು ತೊಂದರೆಗಳನ್ನು ಅನುಭವಿಸಿರುತ್ತಾಳೆ ! ಆಕೆಯು ನಿಮಗೆ ಒಳ್ಳೆಯ ವಿಷಯಗಳನ್ನು ಬೋಧಿಸಿರುವಳು ಬಹಳ ಕುತೂಹಲದಿಂದ ನಿಮ್ಮನ್ನು ಸಂರಕ್ಷಿಸಿರುವಳು. ತನ್ನ ವೇಳೆಯನ್ನೂ ತನ್ನ ಪ್ರೇಮವನ್ನು ನಿಮಗೆ ಮೀಸಲಾಗಿಟ್ಟಿರುವಳು. ಇಂತಹ ಪ್ರಿಯತಮವಾದ ವಸ್ತುವು ಇಹ ಲೋಕದ ಯಾತ್ರೆಯನ್ನು ಮುಗಿಸಿದಾಗ ಎಂತಹ ಭಯಂಕರವಾದ ಪೆಟ್ಟು ಬಿದ್ದಂತಾಗುವುದು ! ಪ್ರೇಮದ ಕಟ್ಟೆ ಒಡೆದು ಹೋಗುವುದು.

ನಾನು ಈಗತಾನೇ ನನ್ನ ತಾಯಿಯನ್ನು ಕಳೆದುಕೊಂಡಿರುವೆ. ಐವತ್ತು ವರ್ಷಗಳ ಕಾಲ ತಾಯಿಯ ಪ್ರೇಮ ವೆಂಬುದನ್ನು ನಾನು ಅನುಭವಿಸಿದೆ. ಆದುದರಿಂದ ಈಗ ನನಗೆ ಒದಗಿರುವ ದುಃಖದ ತೀಕ್ಷ್ಣತೆಯು ತಿಳಿಯುವುದು. ನಾನು ಹುಡುಗನಾದಾಗ ಆಕೆಯು ನನ್ನನ್ನು ತರಬೇತು ಮಾಡಿದಳು. ಪ್ರಾಯಕ್ಕೆ ಬಂದ ಮೇಲೆ ನನ್ನ ಕೆಲಸವನ್ನು ಮಾಡುವಾಗ ಕಾವಲಾಗಿ ನೋಡುತ್ತಿದ್ದಳು ಸ್ಕೌಟ್ ಚಳುವಳಿಯನ್ನು ಏರ್ಪಡಿಸುವ ಕಾಲದಲ್ಲಿ ಅದು ಸಾಧ್ಯವಾಗುವುದೋ ಇಲ್ಲವೋ ಎಂದು ನಾನೇ ಅನುಮಾನದಲ್ಲಿದ್ದಾಗ ನಿಜವಾಗಿಯೂ ಅದು ಸಾಧ್ಯವಾಗುವುದೆಂದೂ, ಸಹಸ್ರಾರು ಜನ ಬಾಲಕರಿಗೆ ಅದರಿಂದ ಉಪ

ಕಾರವಾಗುವುದೆಂದೂ ನನ್ನ ತಾಯಿಯು ಉತ್ತೇಜನ ಕೊಟ್ಟಮೇಲೆ ನಾನು ಅದಕ್ಕೆ ಕೈಹಾಕಿದೆನು. ಆಕೆಯ ಆಶೀರ್ವಾದ ಬಲದಿಂದಲೇ ಚಳುವಳಿಯು ಸಾಧ್ಯ ವಾಯಿತು.

ನಿಮ್ಮ ತಾಯಿಯನ್ನು ನೀವು ಕಳೆದು ಕೊಳ್ಳುವುದ ಕ್ಕಿಂತಲೂ ನಿಮ್ಮ ತಾಯಿಯು ನಿಮ್ಮನ್ನು ಕಳೆದುಕೊಳ್ಳು ವುದೇ ಹೆಚ್ಚು ದುಃಖಕರವಾದುದು. ನಿಮ್ಮನ್ನು ಕಳೆದು ಕೊಳ್ಳುವುದೆಂದರೆ ನಿಮ್ಮ ಮರಣದಿಂದ ಎಂದಲ್ಲ. ನಿಮ್ಮ ಅಕೃತ್ಯಗಳಿಂದ, ನಿಮ್ಮ ಕೆಟ್ಟ ಕೆಲಸಗಳಿಂದ, ನಿಮ್ಮ ತಾಯಿಯು ನೀವು ಜೀವಂತರಾಗಿದ್ದರೂ ನಿಮ್ಮನ್ನು ಕಳೆದುಕೊಂಡಂತೆಯೇ ಆಗುವುದು. ನೀವು ದುರ್ನಡತೆ ಗಳಿಗೆ ಬಿದ್ದರೆ ನಿಮ್ಮ ತಾಯಿಗೆ, ನಿಮ್ಮನ್ನು ಹೊತ್ತು, ಹೆತ್ತು ಸಾಕಿ ಸಲಹಿದ ತಾಯಿಗೆ—ನಿಮಗೆ ಹೆಜ್ಜೆಯಿಡುವು ದನ್ನು ಕಲಿಸಿ ದೇವರ ಪ್ರಾರ್ಥನೆ ಮಾಡುವುದನ್ನು ಭೋದಿಸಿ ಒಳ್ಳೆಯ ಅಭಿಪ್ರಾಯಗಳನ್ನು ತಿಳಿಸಿ ನೀವು ಸರಿಯಾಗಿ ಕೆಲಸಗಳನ್ನು ಮಾಡುತ್ತಿರುವುದನ್ನು ನೋಡಿ ಸಂತೋಷಿಸುವ ನಿಮ್ಮ ತಾಯಿಗೆ ಎಷ್ಟು ಸಂಕಟವಾಗುವು ದೆಂದು ಒಮ್ಮೆಯಾದರೂ ಆಲೋಚಿಸಿರುವಿರಾ ?

ನೀವು ದೊಡ್ಡವರೂ, ಬಲಿಷ್ಠರೂ, ಜಾಣರೂ ಆಗುವು ದನ್ನು ನೋಡಿ ಮುಂದೆ ನೀವು ಸರಿಯಾದ ಜೀವನ ನಡೆ ಸುವಿರೆಂದೂ ತಾನು ಹೆಮ್ಮೆಪಡುವಂತೆ ದೊಡ್ಡ ಕೀರ್ತಿ ಯನ್ನು ಸಂಪಾದಿಸುವಿರೆಂದೂ ಮನಃಪೂರ್ತಿಯಾಗಿ ಬಯಸಿದ್ದಳು. ಆದರೆ ನೀವು ಪೋಲಿಯಾಗಿ ಅಲೆದಾ ಡುತ್ತಾ ದೂರದೃಷ್ಟಿಯನ್ನೂ, ಸೂಕ್ಷ್ಮ ಬುದ್ಧಿಯನ್ನೂ ತೋರಿಸದಿದ್ದರೆ ಆಕೆ ಆಶಾಭಂಗ ಹೊಂದಿ ದುಃಖದಿಂದ ಎದೆಯೊಡೆಯುವಳು. ಆಕೆಯ ನಿರೀಕ್ಷಣೆಯಲ್ಲಾ ಮಾಯ ವಾಗುವುದು. ನೀವು ದಾರಿತಪ್ಪಿಹೋದುದನ್ನು ನೋಡಿದರೆ ನಿಮ್ಮ ಮರಣದಿಂದಾಗುವುದಕ್ಕಿಂತ ಹೆಚ್ಚು ದುಃಖ ಆಕೆಗಾಗುವುದು.

ಯಾವ ಉದ್ಯೋಗವನ್ನು ತೆಗೆದುಕೊಂಡರೂ ಅದರ ಲ್ಲಿಯೇ ಜಯಶೀಲರಾದರೆ ಆಗ ಆಕೆಗೆ ಸಂತೋಷವಾಗು ವುದು. ಆಕೆಯ ಆಸೆಗೆ ಕಲ್ಲುಹಾಕದೆ ನಿಮ್ಮ ಕೈಲಾದ ರೀತಿಯಲ್ಲಿ ಆಕೆಗೆ ಸೌಖ್ಯವನ್ನುಂಟುಮಾಡಿರಿ. ಇದು ನಿಮ್ಮ ಕರ್ತವ್ಯ. ಆಕೆಯು ಜೀವಂತಳಾಗಿದ್ದಾಗ ನಿಮ್ಮ ಕರ್ತವ್ಯವನ್ನು ನೀವು ಮಾಡಿರುವಿರೆಂಬ ಸಮಾಧಾನವು ಆಕೆಯು ಮರಣ ಹೊಂದಿದಾಗ ಇರುವುದು—ಒಳ್ಳೆಯ ವರಾರು, ತಮ್ಮ ತಾಯಿಗೆ ಒಳ್ಳೆಯ ಮಕ್ಕಳಾಗದಿರರು. ತಾಯಿಯ ನಿರೀಕ್ಷಣೆಯಂತೆ ನಡೆಸುವವರು ಬಹಳ ಅಭಿ ವೃದ್ಧಿ ಹೊಂದುವರು"—ಬೇಡನ್ ಪೊವೆಲ್.

ಸುವರ್ಣಾಕ್ಷರಗಳಲ್ಲಿ ಶಾಶ್ವತವಾಗಿ ಕೆತ್ತಿಡ ಬೇಕಾದ ಎಂತಹ ಅಮೂಲ್ಯವಾದ ಸಂದೇಶ ! ಬೇಡನ್ ಪೊವೆಲ್ ತಮ್ಮ ತಾಯಿಯ ನಿರೀಕ್ಷಣೆಗೆ ಕುಂದು ತರಲಿಲ್ಲ.

(ಮುಂದುವರಿಯುವುದು)

ಸಂಕ್ಷೇಪಿಸಿದವರು : **ಕೆ. ಬಿ. ರಾಜಶೇಖರ್**

## ಸೂಕ್ತಿ

**ಚಂದ್ರನ ಕಲೆ ಅವನ ಕಿರಣಗಳಲ್ಲಿ ಲೀನವಾಗುವಂತೆ, ಅನೇಕ ಗುಣಗಳಲ್ಲಿ ಒಂದು ಲೋಪ ಲೀನವಾಗುತ್ತದೆ.**

**—ಕಾಳಿದಾಸ**

# ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತ

**ಬೆಂಗಳೂರು-560 018**

(ಷೆಡ್ಯೂಲ್ಡ್ ಸಹಕಾರಿ ಬ್ಯಾಂಕು)

ಪ್ರಧಾನ ಕಛೇರಿ : **ಬೆಂಗಳೂರು-18**

**ಸಾಲಗಳು ಮತ್ತು ಮುಂಗಡಗಳು — 143 ಕೋಟಿ ರೂ. ಗಳನ್ನು ಮೀರಿದೆ.**

**ದುಡಿಯುವ ಬಂಡವಾಳ — 197 ಕೋಟಿ ರೂ. ಗಳನ್ನು ಮೀರಿದೆ.**

ರಾಜ್ಯದಲ್ಲಿನ ಕೃಷಿ ಮತ್ತು ಕೃಷಿ ಕೈಗಾರಿಕೆಗಳಿಗೆ ಹಣಕಾಸನ್ನೊದಗಿಸುವ ಪ್ರಧಾನ ಬ್ಯಾಂಕು.

ನಮ್ಮಲ್ಲಿ ಹಣ ಹೂಡಿ ನಾಡಿನ ರೈತರ ಮತ್ತು ರಾಷ್ಟ್ರದ ಏಳಿಗೆಗೆ ನೆರವಾಗಿ
ಎಲ್ಲಾ ವಿಧವಾದ ಠೇವಣಾತಿಗಳ ಮೇಲೂ ಇತರ ಬ್ಯಾಂಕುಗಳಿಗಿಂತ ಶೇಕಡ $\frac{1}{4}$ ರಷ್ಟು ಅಧಿಕ ಬಡ್ಡಿ ನೀಡುತ್ತೇವೆ.

**ಅವಧಿ ಠೇವಣಾತಿಗಳ ಮೇಲೆ — ಶೇಕಡ $3\frac{1}{4}$ ರಿಂದ ಶೇಕಡ $10\frac{1}{4}$ ರವರೆಗೆ ವಿಭಿನ್ನ ಬಡ್ಡಿದರ.**

**ಉಳಿತಾಯ ಖಾತೆಯ ಮೇಲೆ — ಶೇಕಡ $5\frac{1}{4}$ ರಷ್ಟು ಬಡ್ಡಿ**

ಇತರೆ ಹಲವು ರೀತಿಯ ಆಕರ್ಷಕ ಠೇವಣಾತಿ ಯೋಜನೆಗಳು.

**ನಮ್ಮ 29 ಶಾಖೆಗಳಲ್ಲಿ ಯಾವ ಶಾಖೆಯನ್ನಾದರೂ ಸಂಪರ್ಕಿಸಿ**

**ಹಾಗೂ ನಿಮ್ಮ ಹೆಚ್ಚುವರಿ ಹಣವನ್ನು ನಮ್ಮಲ್ಲಿ ಹೂಡಿರಿ.**

## ರಾಷ್ಟ್ರದ ಅಭ್ಯುದಯಕ್ಕಾಗಿ ಬನ್ನಿ ನಮ್ಮ ಜೊತೆಗೂಡಿ

| | | |
|---|---|---|
| **ಜಿ. ಎಸ್. ಹೆಗಡೆ ಅಜ್ಜೀಬಳ** | **ಎಂ. ಎನ್. ನಾಗಭೂಷಣ್** | **ಕೆ. ಜೈರಾಜ್, ಐ.ಎ.ಎಸ್.** |
| ಅಧ್ಯಕ್ಷರು | ಉಪಾಧ್ಯಕ್ಷರು | ವ್ಯವಸ್ಥಾಪಕ ನಿರ್ದೇಶಕರು |

# Desiderata (Revised)

**by Ken shigelshi**

Go placidly amid the noise and excitement of your meeting.
And remember that this is one sign of good Scouting.
As far as possible without surrender
Be on good terms with all your fellow leaders.
Plan your programs carefully and cheerfully;
And listen to others.
Even the youngest Wolf Cub;
He will give you many moments of joy.
Avoid loud and aggressive gatherings of Scouters.
Except when you're part of one.
If you compare your pack with others,
Do not become vain or bitter;
For sucess can only be judged by the smiles on their faces.
Enjoy your achievements as well as your plans.
Keep in mind the Aim of the movement,
However hard to understand at times,
It is a real possession in the changing fortunes of time.
Exercise caution with your pack funds;
For a Cub works hard for his dues.
But let this not blind you to what scouting is all about.
Baden-Powell wrote it himself; Camping and the Outdoors.
Be yourself.
Especially, have fun.
Neither 'burn out' too soon;
For in the face of all aridity and disenchantment
Those boys are depending on you.
Take kindly the counsel of pour Service Team,
They will help you all that they can.
Nurture strength of spirit in case of a failure
But do not blame yourself....you have done your best,
And what you think of as 'failure' may be 'super fun' to your Cubs
Beyond a wholesome discipline,
Be gentle with yourself.
You are the most important person in Scouting;
We need more adults like yourself
To help the youth of this world.
And whether or not it is clear to you,
You are molding the future of this country.
Therefore, be at peace with God,
Whatever you conceive Him to be,
And whatever your labours and aspirations,
In the noisy confusion of your meeting
Keep peace with yourself.
With all its hard work and sometimes frustration,
It is still a wonderful movement.
Be cheerful
Strive for good Scouting....

Collection : **K. KASINATH**

## THE BHARAT SCOUTS AND GUIDES, KARNATAKA

**National Integration Project—Training Programme**

**From August to October 1987**

Community Singing course-cum-Flock Leaders Advance Course.
Place : Besant Park
Date : 8th to 17th August 1987.

Community Singing course-cum-Guide Captains Advance Course.
Place : Besant Park
Date : 8th to 17th August 1987.

Community Singing course-cum-H.W. B. Part II (Bulbul).
Place : Besant Park
Date : 8th to 17th August 1987.

Commuuity Singing Course-cum-H.W. B. Part II (Guides)
Place : Besant Park
Date : 8th to 17th August 1987.

Community Singing course-cum-Advance Flock Leaders camp.
Place : Kondajji
Date : 7th to 16th October 1987.

Community Singing course-cum Advance Guide Captains camp.
Place : Kondajji
Date : 7th to 16th October 1987.

*** ***

Community Singing cum-pre Himalaya Wood Badge Camp for Pack Scouters.
Date : 24th to 30th July 1987
Place : Kondajji

Community Singing cum-pre Himalaya Wood Badge (S) Camp.
Date : 22nd to 30th July 1987
Place : Kondajji

Community Singing cum-pre Himalaya Wood Badge (C) Course.
Date : 19th to 25th Angust 1987
Place : Besant Park

Community Singing cum-pre Himalaya Wood Badge (S) Camp.
Date : 17th to 25th August 1987
Place : Besant Park

Community Singing cum-Himalaya Wood Badge Camp for Cubmasters.
Date : 6th to 14th October 1987
Place : Besant Park

Community Singing cum-Himalaya Wood Badge (S) Camp.
Date : 5th to 14th October 1987
Place : Besant Park

# Scouting does help to Make A Better World

So you think Scouting is a good character building out door activity? you are quite right. But if you think today's Scouting is limited to camping, tying knots and signalling, you are quite wrong.

For some time now, Scouting has been a program of complimentary education through which young people can contribute directly towards solving major problems facing the youth and humanity.

In this way, Scouting accomplishes a lot but Scouting CAN do a lot more!

For Scouting is unique, a constructive channel for the idealism, concerns and energy of young people.

*Courtesy : World Scout Bureau*
*Asia Pacific Region*

Regd. No. B. G. W. 11

# Southern Regional Seminar on 'Sanitation Promotion & IYSH'

A Southern Regional Seminar on Sanitation Promotion and International year of shelter for Homeless' organised by the National Headquarters, was inaugurated by Sri V. P. Deenadayalu Naidu, SCC Karnataka and Chief Commissioner (Scouts) India, at Besant Park, Doddaballapur on June 21st at 5 p.m. Sri O. A. Kanagasabai SCC, Tamilnadu B.S. & G. presided. Sri V. R. Ganathey, Joint Director (S) NHQ, was the leader of this seminar. Sri R. C. Manchanda, D.D. (S) and Smt. A. Alamelu D.D. (G) assisted the leader.

Hundred members from the all Southern States of Kerala, Tamil Nadu, Andhra Pradesh, Pondichery, Andaman & Nicobar, South Central Railway, Southern Railway and Karnataka participated in this seminar. Sri Sangameswaran, ROC (S) welcomed & Smt. Pushpa Nadakarni, ROC (G) proposed vote of thanks, Sri T. S. Lucas, Deputy Director, (Training) gave details of the Seminar. Major M.R. Narayan Singh, State Commissioner (S) & Sri K. B. Shanmukhappa, State Secretary, Karnataka & Dr. K. Baktavasan, State Secretary, Tamilnadu were also present.

The Regional Seminar was organised from 21st to 25th June, 87. During the course of the Seminar, several important subjects like Sanitation Promotion, Family Life Education, Community Development, Community Service, Leprosy Control etc., were discussed.

Published by Sri K. B. Shanmukhappa, State Secretary, Bharath Scouts and Guides, Karnataka State Headquarters, Fort, Bangalore-560 002 and Printed by Sri B. Basavaia ... Director at S. J. M. Mudrana Pvt. Ltd., Sampangiramanagar, Bangalore-560 027 ... 9





Book-Post

To

Smt X Usha Ramaiah,
NO.124, 42.nd Cross, B. Block.
Jayanagar, Bangalore-560 011.

BHARAT SCOUTS & GUIDES
Prof. P. Sivashankar Circle
Fort, Bangalore-560 002